# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಮಾರ್ಚ್ ೩, ೨೦೧೬ (ಫಾಲ್ಗುಣ ೧೩, ಶಕ ವರ್ಷ ೧೯೩೭)<br>Bengaluru, Thursday, March 3, 2016 (Phalguna 13, Shaka Varsha 1937) | ಸಂಚಿಕೆ ೯<br>Issue 9 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

**ವಿಷಯ :** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, ಲೋಕೋಪಯೋಗಿ ಇಲಾಖೆ, ಕಲಬುರಗಿ ವಲಯ ಕಛೇರಿಯನ್ನು ಮರುನಾಮೀಕರಿಸುವುದು ಹಾಗೂ ಬಳ್ಳಾರಿ ವೃತ್ತ ಕಛೇರಿಗಳನ್ನು ಸೇರ್ಪಡೆ ಮಾಡುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಲೋಇ 702 ಸೇಸಎ 2014, ದಿನಾಂಕ:02–11–2015.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರದ ಆದೇಶ ಸಂಖ್ಯೆ: ಲೋಇ 702 ಸೇಸಎ 2014, ದಿನಾಂಕ: 02–11–2015ರಲ್ಲಿ ಲೋಕೋಪಯೋಗಿ ವೃತ್ತ, ಕಲಬುರಗಿ ವ್ಯಾಪ್ತಿಯಲ್ಲಿ ಬರುವ ಅಭಿವೃದ್ಧಿ ಕಾಮಗಾರಿಗಳ ಅನುಷ್ಠಾನದಲ್ಲಿ ತಾಂತ್ರಿಕ/ ಆಡಳಿತಾತ್ಮಕ ಅನುಮೋದನೆಯನ್ನು ಶೀಘ್ರಗೊಳಿಸಿ ಹಾಗೂ ಕಾಮಗಾರಿಗಳನ್ನು ಸುಗಮವಾಗಿ ಅನುಷ್ಟಾನಗೊಳಿಸುವ ಹಿತದೃಷ್ಟಿಯಿಂದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, ಲೋಕೋಪಯೋಗಿ ಇಲಾಖೆ, ಕಲಬುರಗಿ ಇಲ್ಲಿ ನೂತನ ವಲಯ ಕಛೇರಿಯನ್ನು ಸೃಜಿಸಲಾಗಿರುತ್ತದೆ. ಸದರಿ ಕಛೇರಿಯ ವ್ಯಾಪ್ತಿಯಲ್ಲಿ ಲೋಕೋಪಯೋಗಿ ವೃತ್ತ, ಕಲಬುರಗಿ ಕಛೇರಿ ವ್ಯಾಪ್ತಿಯಲ್ಲಿ ಬರುವ 1) ಲೋಕೋಪಯೋಗಿ ವಿಭಾಗ, ಕಲಬರುಗಿ, 2) ಲೋಕೋಪಯೋಗಿ ವಿಭಾಗ, ಯಾದಗಿರಿ, 3) ಲೋಕೋಪಯೋಗಿ ವಿಭಾಗ, ಬೀದರ್ ಮತ್ತು 4) ಲೋಕೋಪಯೋಗಿ ವಿಭಾಗ, ಸೇಡಂ ವಿಭಾಗಗಳನ್ನು ನಿಗದಿಪಡಿಸಿ ಆದೇಶಿಸಲಾಗಿರುತ್ತದೆ.

ಮುಂದುವರೆದು, ಹೈದರಾಬಾದ್–ಕರ್ನಾಟಕ ಭಾಗದಲ್ಲಿ ಬರುವ 6 ಜಿಲ್ಲೆಗಳಲ್ಲಿ ಸರ್ಕಾರದ ವಿವಿಧ ಯೋಜನೆಯಡಿ ಕಾಮಗಾರಿಗಳನ್ನು ತೆಗೆದುಕೊಳ್ಳಲಾಗುತ್ತಿದ್ದು, ಸದರಿ ಕಾಮಗಾರಿಗಳನ್ನು ಹಾಗೂ ಹೈದರಾಬಾದ್–ಕರ್ನಾಟಕ ಪ್ರಾದೇಶಿಕ ಅಭಿವೃದ್ಧಿ ಮಂಡಳಿಯಿಂದ ತೆಗೆದುಕೊಳ್ಳಬೇಕಾದ ಹಲವಾರು ಅಭಿವೃದ್ಧಿ ಕಾಮಗಾರಿಗಳಿಗೆ ಆಡಳಿತಾತ್ಮಕ ಹಾಗೂ ತಾಂತ್ರಿಕ ಅನುಮೋದನೆಯನ್ನು ಪಡೆದು ಕಲಂ 371 (ಜೆ) ವ್ಯಾಪ್ತಿಯ 6 ಜಿಲ್ಲೆಗಳ ಅಭಿವೃದ್ಧಿ ಕಾರ್ಯಗಳನ್ನು ಶೀಘ್ರವಾಗಿ ಪೂರ್ಣಗೊಳಿಸುವ ಬಗ್ಗೆ ಉದ್ದೇಶಿಸಲಾಗಿದ್ದು, ಅದರಂತೆ ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 702 ಸೇಸಎ 2014, ಬೆಂಗಳೂರು, ದಿನಾಂಕ: 08–01–2016.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಸರ್ಕಾರದ ಆದೇಶ ಸಂಖ್ಯೆ: ಲೋಇ 702 ಸೇಸಎ 2014, ದಿನಾಂಕ: 02–11–2015ರಲ್ಲಿ ಹೊಸದಾಗಿ ಸೃಜಿಸಲಾದ "ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, ಲೋಕೋಪಯೋಗಿ ಇಲಾಖೆ ಕಲಬುರಗಿ" ಕಛೇರಿಯನ್ನು "ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಈಶಾನ್ಯ), ಲೋಕೋಪಯೋಗಿ ಇಲಾಖೆ, ಕಲಬುರಗಿ" ಎಂದು ಮರುನಾಮೀಕರಿಸಿದೆ ಹಾಗೂ ನೂತನವಾಗಿ ಸೃಜಿಸಲಾದ ಕಲಬುರಗಿ ವಲಯ ಕಛೇರಿಗೆ ಲೋಕೋಪಯೋಗಿ ವೃತ್ತ ಬಳ್ಳಾರಿ ಕಛೇರಿ ವ್ಯಾಪ್ತಿಯಲ್ಲಿ ಬರುವ 1) ಲೋಕೋಪಯೋಗಿ ವಿಭಾಗ, ಬಳ್ಳಾರಿ, 2) ಲೋಕೋಪಯೋಗಿ ವಿಭಾಗ, ಹೂವಿನಹಡಗಲಿ, 3) ಲೋಕೋಪಯೋಗಿ ವಿಭಾಗ, ರಾಯಚೂರು ಮತ್ತು 4) ಲೋಕೋಪಯೋಗಿ ವಿಭಾಗ, ಕೊಪ್ಪಳ ವಿಭಾಗಗಳ ವ್ಯಾಪ್ತಿಯನ್ನು ಸಹ ಸೇರ್ಪಡೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮರಿಯಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ)

PR. 71

SC.250

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ** : ದಾಲ್ಚಿನ್ನಿ ಎಲೆಗಳ ಕಿರು ಅರಣ್ಯ ಉತ್ಪನ್ನವನ್ನು ಸಂಗ್ರಹಿಸಲು ಮತ್ತು ಮಾರಾಟ ಮಾಡಲು ಲ್ಯಾಂಪ್ಸ್ (ಬೃಹತ್ ಪ್ರಮಾಣದ ಆದಿವಾಸಿ ವಿವಿದೋದ್ದೇಶ ಸಹಕಾರ ಸಂಘ) ಸೊಸೈಟಿಗಳಿಗೆ ಅನುಮತಿ ನೀಡುವ ಕುರಿತು.

**ಓದಲಾಗಿದೆ** : 1. ಸರ್ಕಾರದ ಆದೇಶ ಸಂಖ್ಯೆ: ಅಪಜೀ 40 ಎಫ್‌ಡಿಪಿ 2008, ಬೆಂಗಳೂರು, ದಿನಾಂಕ: 19.08.2013.

2. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ಅರಣ್ಯ ಪಡೆ ಮುಖ್ಯಸ್ಥರು) ಬೆಂಗಳೂರು ಇವರ ಪತ್ರ ಸಂಖ್ಯೆ: ಬಿ3/ಸೇಲ್ಸ್/ಕಿ.ಅ.ಉ/ವಿವ/52/2014–15, ದಿನಾಂಕ: 15.06.2015.

**ಪ್ರಸ್ತಾವನೆ:**

ಮೇಲೆ ಓದಲಾದ(1)ರ ದಿನಾಂಕ:19.08.2013ರ ಸರ್ಕಾರದ ಆದೇಶದಲ್ಲಿ ಮೈಸೂರು, ಚಾಮರಾಜನಗರ, ಕೊಡಗು, ದಕ್ಷಿಣ ಕನ್ನಡ, ಉಡುಪಿ, ಉತ್ತರ ಕನ್ನಡ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿನ 20 ಲ್ಯಾಂಪ್ಸ್ ಸೊಸೈಟಿಗಳಿಗೆ ಸೇವಾ ಕ್ಷೇತ್ರವನ್ನು ರಾಜ್ಯದ ಹಾಲಿಯಿರುವ 21 ತಾಲ್ಲೂಕುಗಳಿಗೆ ಸೀಮಿತಗೊಳಿಸಿ ಲ್ಯಾಂಪ್ಸ್ ಸಹಕಾರ ಸಂಘಗಳಿರುವ ತಾಲ್ಲೂಕುಗಳಲ್ಲಿ ಒಟ್ಟು 25 ಕಿರು ಅರಣ್ಯ ಉತ್ಪನ್ನಗಳನ್ನು ಮಾತ್ರ ಸಂಗ್ರಹಿಸಲು ಆದೇಶಿಸಲಾಗಿತ್ತು.

ಮೇಲೆ ಓದಲಾದ (2)ರ ದಿನಾಂಕ: 15.06.2015ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ಅರಣ್ಯ ಪಡೆ ಮುಖ್ಯಸ್ಥರು), ಬೆಂಗಳೂರು ರವರು ದಾಲ್ಚಿನ್ನಿ ಎಲೆಗಳು ಲಭ್ಯವಿರುವ ವೃತ್ತಗಳಾದ ಕೊಡಗು, ಮೈಸೂರು, ಕೆನರಾ, ಮಂಗಳೂರು, ಚಿಕ್ಕಮಗಳೂರು ಹಾಗೂ ಚಾಮರಾಜನಗರ ಇವರುಗಳಿಂದ ವರದಿ ಪಡೆದಿದ್ದು, ಕೊಡಗು, ಕೆನರಾ, ಮಂಗಳೂರು ಹಾಗೂ ಚಿಕ್ಕಮಗಳೂರು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಶಿಫಾರಸ್ಸಿನ್ವಯ ಗ್ರಾಮ ಅರಣ್ಯ ಸಮಿತಿಗಳಿಗೆ ಈಗಾಗಲೇ ಹಸ್ತಾಂತರಿಸಿರುವ ಅರಣ್ಯ ಪ್ರದೇಶ ಹೊರತುಪಡಿಸಿ, ಉಳಿದ ಅರಣ್ಯ ಪ್ರದೇಶಗಳಿಂದ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಮತ್ತು ಇನ್ನಿತರ ಬುಡಕಟ್ಟು ಫಲಾನುಭವಿಗಳು ದಾಲ್ಚಿನ್ನಿ ಎಲೆಗಳ ಕಿರು ಅರಣ್ಯ ಉತ್ಪನ್ನವನ್ನು ಸಂಗ್ರಹಿಸಲು ಸೂಕ್ತ ಆದೇಶ ಹೊರಡಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 94 ಎಫ್‌ಡಿಪಿ 2015, ಬೆಂಗಳೂರು, ದಿನಾಂಕ:16.12.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕೊಡಗು ವೃತ್ತ, ಕೆನರಾ ವೃತ್ತ, ಮಂಗಳೂರು ವೃತ್ತ ಮತ್ತು ಚಿಕ್ಕಮಗಳೂರು ವೃತ್ತಗಳಲ್ಲಿ ಗ್ರಾಮ ಅರಣ್ಯ ಸಮಿತಿಗಳಿಗೆ ಈಗಾಗಲೇ ಹಸ್ತಾಂತರಿಸಿರುವ ಅರಣ್ಯ ಪ್ರದೇಶ ಹೊರತುಪಡಿಸಿ ಉಳಿದ ಅರಣ್ಯ ಪ್ರದೇಶಗಳಿಂದ ಈ ಕೆಳಕಂಡ ಷರತ್ತುಗಳನ್ವಯ ದಾಲ್ಚಿನ್ನಿ ಎಲೆಗಳ ಕಿರು ಅರಣ್ಯ ಉತ್ಪನ್ನವನ್ನು ಸಂಗ್ರಹಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

1. ಸರ್ಕಾರದ ಆದೇಶದ ಸಂಖ್ಯೆ: ಅಪಜೀ 40 ಎಫ್‌ಡಿಪಿ 2008, ದಿನಾಂಕ: 19.08.2013ರ ಎಲ್ಲಾ ಷರತ್ತುಗಳು ಮತ್ತು ನಿಬಂಧನೆಗಳನ್ನು ಪಾಲಿಸತಕ್ಕದ್ದು.
2. ಪ್ರತಿ ವಲಯಗಳಲ್ಲಿ ಬ್ಲಾಕ್‌ಗಳನ್ನು ಮಾಡಿ ಹಂತ ಹಂತವಾಗಿ ಒಂದೊಂದು ಬ್ಲಾಕ್‌ನಲ್ಲಿ ಒಂದೊಂದು ವರ್ಷ ದಾಲ್ಚಿನ್ನಿ ಎಲೆಗಳನ್ನು ಸಂಗ್ರಹಿಸುವುದು.
3. ದಾಲ್ಚಿನ್ನಿ ಎಲೆಗಳನ್ನು ಅರಣ್ಯ ಸಿಬ್ಬಂದಿಗಳ ಮೇಲುಸ್ತುವಾರಿಯಲ್ಲಿ ಯಾವುದೇ ಮರಗಳ ಕೊಂಬೆ, ರೆಂಬೆಗಳನ್ನು ಕತ್ತರಿಸದೆ ಮರಗಳಿಗೆ ಹಾನಿಯಾಗದಂತೆ, ಪ್ರತಿ ಮರದಲ್ಲಿ ಲಭ್ಯವಿರುವ ಶೇ. 50% ರಷ್ಟು ಎಲೆಗಳನ್ನು ಮಾತ್ರ ವೈಜ್ಞಾನಿಕ ರೀತಿಯಿಂದ ಸಂಗ್ರಹಣೆ ಮಾಡಲು ಅವಕಾಶ ನೀಡುವುದು.
4. ದಾಲ್ಚಿನ್ನಿ ಮರಗಳಿಗೆ ಹಾನಿಯುಂಟಾದಲ್ಲಿ ಸಂಬಂಧಪಟ್ಟ ಲ್ಯಾಂಪ್ಸ್ ಸೊಸೈಟಿಯನ್ನು ಜವಾಬ್ದಾರರನ್ನಾಗಿ ಮಾಡಿ ಹಾನಿಯ ಮೊಬಲಗನ್ನು ಸಂಬಂಧಿಸಿದವರಿಂದ ವಸೂಲಿ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಸ್. ಭಾಗ್ಯಲಕ್ಷ್ಮಿ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**PR. 39**
**SC.100**

## ಸಂಸದೀಯ ವ್ಯವಹಾರಗಳ ಸಚಿವಾಲಯ

**ವಿಷಯ:** ರಾಜ್ಯ ಸರ್ಕಾರವು ಸಂಸದೀಯ ವ್ಯವಹಾರಗಳ ಇಲಾಖೆಯ ಅಡಿಯಲ್ಲಿ ವಿಧಾನಮಂಡಲದಲ್ಲಿ ಮಂಡಿತವಾಗುವ ಮುನ್ನ ಹೊಸ ಶಾಸನಗಳ ಪರಿಶೀಲನೆಗಾಗಿ ಸಮಾಲೋಚನಾ ಸಮಿತಿಯನ್ನು ರಚಿಸಿಕೊಳ್ಳುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 190 ಆಡಳಿತ 2014, ದಿನಾಂಕ:03.01.2015.

**ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 190 ಆಡಳಿತ 2014, ಬೆಂಗಳೂರು, ದಿನಾಂಕ: 02.12.2015**

ಮೇಲೆ ಓದಲಾಗಿರುವ ಸರ್ಕಾರಿ ಆದೇಶದನ್ವಯ ಕೇಂದ್ರ ಸರ್ಕಾರದಲ್ಲಿರುವ ಸಂಸದೀಯ ವ್ಯವಹಾರಗಳ ಇಲಾಖೆಯ ಅಡಿಯಲ್ಲಿ ರಚಿತವಾಗಿರುವ, ಸಲಹೆ ನೀಡುವ ಸಂಸದೀಯ "ಸಮಾಲೋಚನಾ ಸಮಿತಿ"ಯ ಮಾದರಿಯಲ್ಲಿಯೇ, ಕರ್ನಾಟಕ ಸರ್ಕಾರವು ಸಂಸದೀಯ ವ್ಯವಹಾರಗಳ ಇಲಾಖೆಯ ಅಡಿಯಲ್ಲಿ ಉಭಯ ಸದನದ ಸದಸ್ಯರನ್ನು ಒಳಗೊಂಡ ಪರಿಣಿತರ "ಸಮಾಲೋಚನಾ ಸಮಿತಿ"ಯನ್ನು ರಚಿಸಲಾಗಿದ್ದು, ದಿನಾಂಕ:03.01.2015ರ ಸರ್ಕಾರಿ ಆದೇಶದಲ್ಲಿ ಸೂಚಿರುವ ಷರತ್ತುಗಳಿಗೆ ಒಳಪಟ್ಟು ಈ ಕೆಳಕಂಡ ಸದಸ್ಯರನ್ನು ಒಳಗೊಂಡಿರುವ ಸಮಾಲೋಚನಾ ಸಮಿತಿಯನ್ನು ರಚಿಸಿದೆ ಹಾಗೂ ಸದರಿ ಸಮಿತಿಯ ಚಟುವಟಿಕೆಗಳಲ್ಲಿ ಸಹಕರಿಸುವಂತೆ ಸೂಚಿಸಿದೆ.

| ಕ್ರ ಸಂ. | ಪಕ್ಷದ ಹೆಸರು | ಸದಸ್ಯರ ಹೆಸರು | ಕ್ಷೇತ್ರ | ವಿಳಾಸ | ವಿಧಾನ ಸಭೆ/ವಿಧಾನ ಪರಿಷತ್ತು |
|---|---|---|---|---|---|
| 1. | **ಭಾರತೀಯ ಕಾಂಗ್ರೆಸ್ ಪಕ್ಷ** | ಶ್ರೀ ವೀರಣ್ಣ ಮತ್ತಿಕಟ್ಟಿ | ವಿಧಾನ ಸಭಾ ಕ್ಷೇತ್ರ | ಪ್ರಿಯದರ್ಶಿನಿ, ಯುಬಿ ಹಿಲ್ಸ್, ಧಾರವಾಡ. | ವಿಧಾನ ಪರಿಷತ್ತು ಸದಸ್ಯರು |
| | | ಶ್ರೀ ವಿ.ಎಸ್.ಉಗ್ರಪ್ಪ | ನಾಮನಿರ್ದೇಶನ ಕ್ಷೇತ್ರ | ನಂ.1093, 19ನೇ ಕ್ರಾಸ್, 3ನೇ ಸೆಕ್ಟರ್, ಹೆಚ್.ಎಸ್.ಆರ್. ಲೇಔಟ್, ಬೆಂಗಳೂರು. | ವಿಧಾನ ಪರಿಷತ್ತು ಸದಸ್ಯರು |
| | | ಶ್ರೀ.ಎಸ್.ಆರ್.ಪಾಟೀಲ್ | ವಿಜಯಪುರ ಸ್ಥಳೀಯ ಸಂಸ್ಥೆಗಳ ಕ್ಷೇತ್ರ | ಕೆ.ಹೆಚ್.ಬಿ. ಕಾಲೋನಿ ಬಡಾವಣೆ, ಬಾಗಲಕೋಟೆ–587101 | ವಿಧಾನ ಪರಿಷತ್ತು ಸದಸ್ಯರು |
| | | ಶ್ರೀ ಬಸವರಾಜ್ ರಾಯರೆಡ್ಡಿ | ಯಲ್ಬುರ್ಗ ವಿಧಾನ ಸಭಾ ಕ್ಷೇತ್ರ | "ಆರಾಮ" ನಂ:380, 1ನೇ ಅಡ್ಡ ರಸ್ತೆ, 4ನೇ ಬ್ಲಾಕ್, ಕೋರಮಂಗಲ, ಬೆಂಗಳೂರು–560034 | ವಿಧಾನ ಸಭೆ ಸದಸ್ಯರು |
| | | ಶ್ರೀ ಕೋಳಿವಾಡ್ ಕೆ.ಬಿ. | ರಾಣಿಬೆನ್ನೂರು ವಿಧಾನ ಸಭಾ ಕ್ಷೇತ್ರ | ಗುಡಗುರ್ ವಿಲೇಜ್ ಅಂಚೆ, ರಾಣೆಬೆನ್ನೂರ್ ತಾಲ್ಲೂಕು, ಹಾವೇರಿ ಜಿಲ್ಲೆ. | ವಿಧಾನ ಸಭೆ ಸದಸ್ಯರು |
| | | ಶ್ರೀ ಕ್ಯಾತ್ಸಂದ್ರ ರಾಜಣ್ಣ | ಮಧುಗಿರಿ ವಿಧಾನ ಸಭಾ ಕ್ಷೇತ್ರ | "ರಜತಾದ್ರಿ ನಿಲಯ" ಎನ್.ಹೆಚ್.4, ಕ್ಯಾತಸಂದ್ರ, ತುಮಕೂರು–572104 | ವಿಧಾನ ಸಭೆ ಸದಸ್ಯರು |
| | | ಶ್ರೀ ಯಾವಗಲ್ ಬಿ.ಆರ್. | ನರಗುಂದ ವಿಧಾನ ಸಭಾ ಕ್ಷೇತ್ರ | ಅಂಚೆ ನರಗುಂದ, ಗದಗ ಜಿಲ್ಲೆ | ವಿಧಾನ ಸಭೆ ಸದಸ್ಯರು |
| | | ಶ್ರೀ ವಾಸು | ಚಾಮರಾಜ ವಿಧಾನ ಸಭಾ ಕ್ಷೇತ್ರ | ಬಿನ್ ದಿ॥ ಶ್ರೀ ಚನ್ನಯ್ಯ, ನಂ.16, ದೇವಸ್ಥಾನದ ರಸ್ತೆ, ಜಯಲಕ್ಷ್ಮೀಪುರ, ಮೈಸೂರು–570012 | ವಿಧಾನ ಸಭೆ ಸದಸ್ಯರು |
| | | ಡಾ:ಎ.ಬಿ.ಮಾಲಕರೆಡ್ಡಿ | ಯಾದಗಿರಿ ವಿಧಾನ ಸಭಾ ಕ್ಷೇತ್ರ | #108, 1ನೇ ಮುಖ್ಯ ರಸ್ತೆ, 16ನೇ ಕ್ರಾಸ್, ಎ.ಇ.ಸಿ.ಎಸ್. ಲೇಔಟ್, ಸಂಜಯನಗರ, ಬೆಂಗಳೂರು–560094 | ವಿಧಾನ ಸಭೆ ಸದಸ್ಯರು |
| | | ಶ್ರೀ ಪಾಟೀಲ ಎ.ಎಸ್. (ನಡಹಳ್ಳಿ) | ದೇವರಹಿಪ್ಪರಗಿ ವಿಧಾನ ಸಭಾ ಕ್ಷೇತ್ರ | #1246, 14ನೇ ಮುಖ್ಯ ರಸ್ತೆ, 3ನೇ ಅಡ್ಡ ರಸ್ತೆ, ಜ್ಯುಡಿಷ್ಯಿಲ್ ಲೇಔಟ್, ಜಿಕೆವಿಕೆ ಹತ್ತಿರ, ಯಲಹಂಕ, ಬೆಂಗಳೂರು–560094 | ವಿಧಾನ ಸಭೆ ಸದಸ್ಯರು |
| | | ಶ್ರೀ ಶಿವಮೂರ್ತಿ ಕೆ. | ಮಾಯಕೊಂಡ ವಿಧಾನ ಸಭಾ ಕ್ಷೇತ್ರ | ನಂ:1, ದೊಡ್ಡರಂಗವನಹಳ್ಳಿ ವಿಲೇಜ್, ನೆರುಲಿಗೆ ಪೋಸ್ಟ್, ದಾವಣಗೆರೆ ತಾಲ್ಲೂಕು ಮತ್ತು ಜಿಲ್ಲೆ. | ವಿಧಾನ ಸಭೆ ಸದಸ್ಯರು |
| | | ಶ್ರೀ ಶ್ರೀನಿವಾಸ್ ಜಿ.ಹೆಚ್. | ತರಿಕೆರೆ ವಿಧಾನ ಸಭಾ ಕ್ಷೇತ್ರ | ಬಿನ್.ನಂಜುಂಡಪ್ಪ, ಗೌಡಹನುಮಯ್ಯನ ಬೀದಿ, ತರೀಕೆರೆ ಟೌನ್, ಚಿಕ್ಕಮಗಳೂರು ಜಿಲ್ಲೆ. | ವಿಧಾನ ಸಭೆ ಸದಸ್ಯರು |
| 2. | **ಭಾರತೀಯ ಜನತಾ ಪಕ್ಷ** | ಶ್ರೀ ಬಿ.ಜೆ.ಪುಟ್ಟಸ್ವಾಮಿ | ವಿಧಾನ ಸಭಾ ಕ್ಷೇತ್ರ | #40/1, "ದ್ವಾರಕಾ" 14ನೇ ಅಡ್ಡರಸ್ತೆ, ವೈಯಾಲಿ ಕಾವಲ್, ಮಲ್ಲೇಶ್ವರಂ, ಬೆಂಗಳೂರು–560003. | ವಿಧಾನ ಪರಿಷತ್ತು ಸದಸ್ಯರು |
| | | ಶ್ರೀ ಗಣೇಶ್ ಕಾರ್ಣಿಕ್ | ಶಿಕ್ಷಕರ ಕ್ಷೇತ್ರ | ಹೆಚ್ ಎ–41, ಹೆಸ್ ಗ್ರೇಸ್, ಬಯಾರೀಸ್ ಅಪಾರ್ಟ್‌ಮೆಂಟ್ಸ್, ಮಾರ್ಟಿನ್ ಪಾಯಸ್ ರಸ್ತೆ, ಹ್ಯಾಟ್ ಹೆಲ್, ಮಂಗಳೂರು–575006. | ವಿಧಾನ ಪರಿಷತ್ತು ಸದಸ್ಯರು |
| | | ಶ್ರೀ ಎಸ್.ಸುರೇಶ್‌ಕುಮಾರ್ | ರಾಜಾಜಿನಗರ ವಿಧಾನ ಸಭಾ ಕ್ಷೇತ್ರ | #35, 7ನೇ 'ಎ' ಮುಖ್ಯ ರಸ್ತೆ, ಶಾರದಾ ಕಾಲೋನಿ, ಬಸವೇಶ್ವರನಗರ, ಬೆಂಗಳೂರು–560079 | ವಿಧಾನ ಸಭೆ ಸದಸ್ಯರು |
| | | ಶ್ರೀ ಗೋವಿಂದ ಕಾರಜೋಳ | ಮುಧೋಳ ವಿಧಾನ ಸಭಾ ಕ್ಷೇತ್ರ | #2705/15 ಕೆ.ಹೆಚ್.ಬಿ ಕಾಲೋನಿ, ಮುಧೋಳ್, ಬಾಗಲಕೋಟೆ ಜಿಲ್ಲೆ | ವಿಧಾನ ಸಭೆ ಸದಸ್ಯರು |

| ಕ್ರ ಸಂ. | ಪಕ್ಷದ ಹೆಸರು | ಸದಸ್ಯರ ಹೆಸರು | ಕ್ಷೇತ್ರ | ವಿಳಾಸ | ವಿಧಾನ ಸಭೆ/ವಿಧಾನ ಪರಿಷತ್ತು |
|---|---|---|---|---|---|
| | | ಶ್ರೀ ಕೆ.ಜಿ.ಬೋಪಯ್ಯ | ವಿರಾಜಪೇಟೆ ವಿಧಾನ ಸಭಾ ಕ್ಷೇತ್ರ | ನಂ.23–232, ವುಡ್ ಲ್ಯಾಂಡ್ ಸನ್ ಮ್ಯಾನ್ಸ್ ಕಾಂಪೌಂಡ್ ರಸ್ತೆ, ಮಡಿಕೇರಿ –571201, ಕೊಡಗು ಜಿಲ್ಲೆ | ವಿಧಾನ ಸಭೆ ಸದಸ್ಯರು |
| 3. | ಜನತಾದಳ (ಜಾತ್ಯಾತೀತ) ಪಕ್ಷ | ಶ್ರೀ ಬಸವರಾಜ್ ಹೊರಟ್ಟಿ | ಪಶ್ಚಿಮ ಶಿಕ್ಷಕರ ಕ್ಷೇತ್ರ | ಅಡವೀಶ್ವರ ಸದನ–26/2, ವೇಮನಬೀದಿ, ಹುಬ್ಬಳ್ಳಿ–580020 | ವಿಧಾನ ಪರಿಷತ್ತು ಸದಸ್ಯರು |
| | | ಶ್ರೀ ಎಂ.ಶ್ರೀನಿವಾಸ್ | ವಿಧಾನ ಸಭಾ ಕ್ಷೇತ್ರ | ನಂ.302, 1ನೇ ಬ್ಲಾಕ್, 6ನೇ ಕ್ರಾಸ್, ಆರ್.ಟಿ.ನಗರ, ಬೆಂಗಳೂರು–560032 | ವಿಧಾನ ಪರಿಷತ್ತು ಸದಸ್ಯರು |
| | | ಶ್ರೀ ಹೆಚ್.ಡಿ.ರೇವಣ್ಣ | ಹೊಳೆನರಸೀಪುರ ವಿಧಾನ ಸಭಾ ಕ್ಷೇತ್ರ | ಶಿವಸ್ಮಿತ ನಿಲಯ, ನಂ.83, ರಾಣೋಜಿ ರಾವ್ ರೋಡ್, ಬಸವನಗುಡಿ, ಬೆಂಗಳೂರು | ವಿಧಾನ ಸಭೆ ಸದಸ್ಯರು |
| | | ಶ್ರೀ ವೈ.ಎಸ್.ವಿ. ದತ್ತ | ಕಡೂರು ವಿಧಾನ ಸಭಾ ಕ್ಷೇತ್ರ | ಬಿನ್ ವೈ.ವಿ.ಸೂರ್ಯನಾರಾಯಣ, ಯಗಟಿ ಗ್ರಾಮ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ | ವಿಧಾನ ಸಭೆ ಸದಸ್ಯರು |
| 4. | ಕರ್ನಾಟಕ ಮಕ್ಕಳ ಪಕ್ಷ | ಶ್ರೀ ಅಶೋಕ ಖೇಣಿ | ಬೀದರ್ (ದಕ್ಷಿಣ) ವಿಧಾನ ಸಭಾ ಕ್ಷೇತ್ರ | #336, 4ನೇ ಮುಖ್ಯ ರಸ್ತೆ, 14ನೇ ಕ್ರಾಸ್, ಸದಾಶಿವನಗರ, ಬೆಂಗಳೂರು–560080 | ವಿಧಾನ ಸಭೆ ಸದಸ್ಯರು |
| 5. | ಸರ್ವೋದಯ ಕರ್ನಾಟಕ ಪಕ್ಷ | ಶ್ರೀ.ಕೆ.ಎಸ್.ಪುಟ್ಟಣ್ಣಯ್ಯ | ಮೇಲುಕೋಟೆ ವಿಧಾನ ಸಭಾ ಕ್ಷೇತ್ರ | ಬಿನ್ ಲೇಟ್ ಶ್ರೀಕಂಠೇಗೌಡ, ಕೆ.ಎಸ್.ಮಂಚನಹಳ್ಳಿ ಬೀದಿ, ಕ್ಯಾತನಹಳ್ಳಿ ವಿಲೇಜ್ & ಪೋಸ್ಟ್, ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ. | ವಿಧಾನ ಸಭೆ ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ.ಗುಂಜಿಗಾವಿ**

ಸರ್ಕಾರದ ಕಾರ್ಯದರ್ಶಿ

ಸಂಸದೀಯ ವ್ಯವಹಾರಗಳ ಇಲಾಖೆ.

**PR. 66**
**SC.50**

## ಇಂಧನ ಸಚಿವಾಲಯ

**ವಿಷಯ:** : ವಿದ್ಯುತ್ ಪರಿವೀಕ್ಷಣಾ ಇಲಾಖೆಯಲ್ಲಿನ ಹೆಲ್ಪರ್, ಡೂಪ್ಲಿಕೇಟಿಂಗ್ ಆಪರೇಟರ್ಸ್ ಮತ್ತು ವಾಚ್‌ಮನ್ ವೃಂದದ ಹುದ್ದೆಗಳನ್ನು ದಲಾಯತ್ ವೃಂದದೊಂದಿಗೆ ವಿಲೀನಗೊಳಿಸುವ ಕುರಿತು.

**ಓದಲಾಗಿದೆ:** : 1. ದಿನಾಂಕ: 27.09.2001 ರ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 9 ಎಸ್‌ಆರ್‌ಡಿ 97.

2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 18.09.2015 ರಂದು ನಡೆದ ವೃಂದ ಪರಿಶೀಲನಾ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ವಿದ್ಯುತ್ ಪರಿವೀಕ್ಷಣಾ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ಅಧಿಸೂಚನೆಯಲ್ಲಿ ರಚಿಸಲಾಗಿರುತ್ತದೆ. ಸದರಿ ವೃಂದ ಮತ್ತು ನೇಮಕಾತಿ ನಿಯಮಗಳ ಸಮಗ್ರ ಪರಿಷ್ಕರಣೆಯ ವಿಷಯವು ಸರ್ಕಾರದ ಪರಿಶೀಲನೆಯಲ್ಲಿದೆ. ವಿದ್ಯುತ್ ಪರಿವೀಕ್ಷಣಾ ಇಲಾಖೆಗೆ ಹೆಲ್ಪರ್ ವೃಂದದ 14 ಹುದ್ದೆಗಳು, ಡೂಪ್ಲಿಕೇಟಿಂಗ್ ಆಪರೇಟರ್ಸ್ ವೃಂದದ 01 ಹುದ್ದೆ ಮತ್ತು ವಾಚ್‌ಮನ್ ವೃಂದದ 01 ಹುದ್ದೆ ಮಂಜೂರು ಮಾಡಲಾಗಿರುತ್ತದೆ. ಆದರೆ, ಸದರಿ ವೃಂದದಲ್ಲಿ ಸದ್ಯ ಯಾವುದೇ ನೌಕರರು ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಈ ವೃಂದಗಳನ್ನು ರದ್ದುಪಡಿಸಿ, ಅವುಗಳನ್ನು ದಲಾಯತ್ ವೃಂದದ ಹುದ್ದೆಗಳೊಂದಿಗೆ ವಿಲೀನಗೊಳಿಸಲು ದಿನಾಂಕ: 27.04.2015 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಇಂಧನ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ವೃಂದ ಪರಿಶೀಲನಾ ಉಪ ಸಮಿತಿ ಸಭೆಯಲ್ಲಿ ನಿರ್ಣಯಿಸಲಾಗಿರುತ್ತದೆ ಮತ್ತು ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ವೃಂದ ಪರಿಶೀಲನಾ ಸಮಿತಿ ಸಭೆಯಲ್ಲಿ ಸದರಿ ಪ್ರಸ್ತಾವನೆಗೆ ಅನುಮೋದನೆಯನ್ನು ನೀಡಲಾಗಿರುತ್ತದೆ.

ವೃಂದ ಪರಿಶೀಲನಾ ಸಮಿತಿ ಸಭೆಯಲ್ಲಿ ಕೈಗೊಳ್ಳಲಾದ ತೀರ್ಮಾನದಂತೆ ವಿದ್ಯುತ್ ಪರಿವೀಕ್ಷಣಾ ಇಲಾಖೆಗೆ ಮಂಜೂರಾಗಿರುವ ಹೆಲ್ಪರ್, ವಾಚ್‌ಮನ್ ಮತ್ತು ಡೂಪ್ಲಿಕೇಟಿಂಗ್ ಆಪರೇಟರ್ಸ್ ವೃಂದದ ಹುದ್ದೆಗಳನ್ನು ದಲಾಯತ್ ವೃಂದದ ಹುದ್ದೆಗಳೊಂದಿಗೆ ವಿಲೀನಗೊಳಿಸಲು ಸರ್ಕಾರವು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 61 ಇಬಿಎಸ್ 2010 (ಭಾಗ-1) ಬೆಂಗಳೂರು, ದಿನಾಂಕ: 04.01.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ವಿದ್ಯುತ್ ಪರಿವೀಕ್ಷಣಾ ಇಲಾಖೆಗೆ ಮಂಜೂರಾಗಿರುವ ಹೆಲ್ಪರ್ ವೃಂದದ 14 ಹುದ್ದೆಗಳು, ಡೂಪ್ಲಿಕೇಟಿಂಗ್ ಆಪರೇಟರ್ಸ್ ವೃಂದದ 01 ಹುದ್ದೆ ಮತ್ತು ವಾಚ್‌ಮನ್ ವೃಂದದ 01 ಹುದ್ದೆಯನ್ನು ದಲಾಯತ್ ವೃಂದದ ಹುದ್ದೆಗಳೊಂದಿಗೆ ಈ ತಕ್ಷಣದಿಂದ ಜಾರಿಗೆ ಬರುವಂತೆ ವಿಲೀನಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಶಿವಕುಮಾರ್**

ಪೀಠಾಧಿಕಾರಿ,

ಇಂಧನ ಇಲಾಖೆ.

**PR. 82**
**SC.100**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಕಲಬುರಗಿ ನಗರದ ಬಡೇಪೂರ ಸರ್ವೆ ನಂ 54ರಲ್ಲಿನ ಸಿ.ಎ. ನಿವೇಶನ ಸಂಖ್ಯೆ: 50 ರ ಅಂದಾಜು ಅಳತೆ 21824 ಚದರಡಿಯ ನಾಗರಿಕ ಸೌಲಭ್ಯದ ನಿವೇಶನವನ್ನು ಜಿಲ್ಲಾ ಕಾಂಗ್ರೆಸ್ ಸಮಿತಿ, ಕಲಬುರಗಿ ಈ ಸಂಸ್ಥೆಗೆ ಹಂಚಿಕೆ ಮಾಡಿದ್ದು, ಸದರಿ ನಿವೇಶನವನ್ನು ರಿಯಾಯಿತಿ ದರದಲ್ಲಿ ನೀಡಲು ಮತ್ತು ಗುತ್ತಿಗೆ ಅವಧಿಯನ್ನು 30 ವರ್ಷದ ಬದಲಾಗಿ 99 ವರ್ಷಗಳಿಗೆ ಮಾರ್ಪಡಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಕಲಬುರಗಿ ನಗರಾಭಿವೃದ್ಧಿ ಪ್ರಾಧಿಕಾರ, ಕಲಬುರಗಿ ಇವರ ಪತ್ರ ಸಂಖ್ಯೆ: ನಪ್ರಾಕ/ನಾನಿಹ/2015-16/964 ದಿನಾಂಕ: 03-09-2015.

**ಪ್ರಸ್ತಾವನೆ:**

ಆಯುಕ್ತರು, ಕಲಬುರಗಿ ನಗರಾಭಿವೃದ್ಧಿ ಪ್ರಾಧಿಕಾರ, ಕಲಬುರಗಿ ಇವರ ದಿನಾಂಕ 03-09-2015 ರಲ್ಲಿ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಕಲಬುರಗಿ ನಗರದ ಬಡೇಪೂರ ಸರ್ವೆ ನಂ 54 ರಲ್ಲಿನ ಸಿ.ಎ. ನಿವೇಶನ ಸಂಖ್ಯೆ: 50 ರ ಅಂದಾಜು ಅಳತೆ 21824 ಚದರಡಿಯ ನಿವೇಶನವನ್ನು ಜಿಲ್ಲಾ ಕಾಂಗ್ರೆಸ್ ಸಮಿತಿಗೆ ಸಾಮಾಜಿಕ ಚಟುವಟಿಕೆ ಮಾಡುವ ಉದ್ದೇಶಕ್ಕಾಗಿ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ (ನಾಗರಿಕ ಸೌಲಭ್ಯದ ನಿವೇಶನಗಳ ಹಂಚಿಕೆ) ನಿಯಮಗಳು 1991 ರ ನಿಯಮಾವಳಿಯಂತೆ 30 ವರ್ಷಗಳ ಗುತ್ತಿಗೆ ಅವಧಿಗೆ ಹಂಚಿಕೆ ಮಾಡಲಾಗಿರುತ್ತದೆ. ಸದರಿ ನಿವೇಶನದ ಗುತ್ತಿಗೆ ಹಣ ರೂ.98,20,800/-ಗಳನ್ನು ನಿಗಧಿಪಡಿಸಲಾಗಿದೆ. ಅಧ್ಯಕ್ಷರು, ಜಿಲ್ಲಾ ಕಾಂಗ್ರೆಸ್ ಸಮಿತಿ, ಕಲಬುರಗಿ ಇವರು ಪ್ರಾಧಿಕಾರಕ್ಕೆ ಮನವಿ ಸಲ್ಲಿಸಿ ರಿಯಾಯಿತಿ ದರದಲ್ಲಿ ಹಂಚಿಕೆ ಮಾಡುವಂತೆ ಮತ್ತು ಗುತ್ತಿಗೆ ಅವಧಿಯನ್ನು 30 ವರ್ಷಗಳ ಬದಲಿಗೆ 99 ವರ್ಷಗಳಿಗೆ ಮಾರ್ಪಡಿಸಲು ಕೋರಿರುತ್ತಾರೆ.

ಈ ವಿಷಯವನ್ನು ಪ್ರಾಧಿಕಾರದ ಸಭೆಯ ದಿನಾಂಕ: 22.08.2015 ರ ವಿಷಯ ಸಂಖ್ಯೆ:17/3 ರಲ್ಲಿ ಚರ್ಚಿಸಿ ರಿಯಾಯಿತಿ ನೀಡಲು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ (ನಾಗರಿಕ ಸೌಕರ್ಯ ನಿವೇಶನಗಳ ಹಂಚಿಕೆ) ನಿಯಮಗಳು 1991 ರ ನಿಯಮಗಳಲ್ಲಿ 30 ವರ್ಷಗಳ ಗುತ್ತಿಗೆ ಅವಧಿಗೆ ಹಂಚಿಕೆ ಮಾಡಲು ಅವಕಾಶವಿದ್ದು, ಸದರಿ ಅವಧಿ ಮುಗಿದ ನಂತರ ಪುನ: ಮತ್ತೆ 30 ವರ್ಷ ಅವಧಿಗೆ ಗುತ್ತಿಗೆ ಅವಧಿ ವಿಸ್ತರಿಸಲು ಅವಕಾಶ ಇರುತ್ತದೆ ಹಾಗೂ ಸದರಿ ನಿವೇಶನ ಮೌಲ್ಯದ ಶೇ 25% ರಷ್ಟು ಮೊತ್ತವನ್ನು ಜಿಲ್ಲಾ ಕಾಂಗ್ರೆಸ್ ಸಮಿತಿಯಿಂದ ಪಾವತಿಸಿಕೊಂಡು ಉಳಿದ ಶೇ 75% ರಷ್ಟು ಮೊತ್ತಕ್ಕೆ ರಿಯಾಯಿತಿ ನೀಡಿ ಹಂಚಿಕೆ ಮಾಡುವ ಬಗ್ಗೆ ಅನುಮೋದನೆ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲು ಸಭೆಯಲ್ಲಿ ನಿರ್ಣಯಿಸಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರು, ಕಲಬುರಗಿ ನಗರಾಭಿವೃದ್ಧಿ ಪ್ರಾಧಿಕಾರ ಇವರ ಪ್ರಸ್ತಾವನೆಯಲ್ಲಿ ಕಲಬುರಗಿ ನಗರದ ಬಡೇಪೂರ ಸರ್ವೆ ನಂ 54ರಲ್ಲಿನ ಸಿ.ಎ. ನಿವೇಶನ ಸಂಖ್ಯೆ: 50 ರ ಅಂದಾಜು ಅಳತೆ 21824 ಚದರಡಿಯ ನಾಗರಿಕ ಸೌಲಭ್ಯದ ನಿವೇಶನವನ್ನು ಜಿಲ್ಲಾ ಕಾಂಗ್ರೆಸ್ ಸಮಿತಿ, ಕಲಬುರಗಿ ಈ ಸಂಸ್ಥೆಗೆ ಹಂಚಿಕೆ ಮಾಡಿದ್ದು, ಸದರಿ ನಿವೇಶನವನ್ನು ರಿಯಾಯಿತಿ ದರದಲ್ಲಿ ನೀಡಲು ಮತ್ತು ಗುತ್ತಿಗೆ ಅವಧಿಯನ್ನು 30 ವರ್ಷದ ಬದಲಾಗಿ 99 ವರ್ಷಗಳಿಗೆ ಮಾರ್ಪಡಿಸುವ ಕುರಿತು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕಲಬುರಗಿ ಜಿಲ್ಲಾ ಕಾಂಗ್ರೆಸ್ ಸಮಿತಿಗೆ ಸಾಮಾಜಿಕ ಚಟುವಟಿಕೆ ಉದ್ದೇಶಕ್ಕಾಗಿ ಈಗಾಗಲೇ ಮಂಜೂರು ಮಾಡಿರುವ ಕಲಬುರಗಿ ನಗರದ ಬಡೇಪೂರ ಸರ್ವೆ ನಂ 54 ರಲ್ಲಿನ ಸಿ.ಎ. ನಿವೇಶನ ಸಂಖ್ಯೆ: 50 ರ ಅಂದಾಜು ಅಳತೆ 21824 ಚದರಡಿಯ ನಿವೇಶನದ ಗುತ್ತಿಗೆ ಅವಧಿಯನ್ನು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ (ನಾಗೇಕ ಸೌಲಭ್ಯದ ನಿವೇಶನಗಳ ಹಂಚಿಕೆ) ನಿಯಮಗಳು 1991 ರ ನಿಯಮಾವಳಿಯಂತೆ 30 ವರ್ಷಗಳ ಗುತ್ತಿಗೆ ಅವಧಿ ಮುಗಿದ ನಂತರ ಪುನಃ ವಿಸ್ತರಿಸಲು ಹಾಗೂ ಸದರಿ ನಿವೇಶನಕ್ಕೆ ಪ್ರಾಧಿಕಾರ ನಿಗಧಿಪಡಿಸಿದ ಗುತ್ತಿಗೆ ಮೊತ್ತ ರೂ.98,20,800/- ರಲ್ಲಿ ಶೇ.10 ರಷ್ಟು ದರ ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 166 ಗುಅಪ್ರಾ 2015 ಬೆಂಗಳೂರು, ದಿನಾಂಕ:01-01-2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕಲಬುರಗಿ ಜಿಲ್ಲಾ ಕಾಂಗ್ರೇಸ್ ಸಮಿತಿಗೆ ಸಾಮಾಜಿಕ ಚಟುವಟಿಕೆ ಉದ್ದೇಶಕ್ಕಾಗಿ ಈಗಾಗಲೇ ಮಂಜೂರು ಮಾಡಿರುವ ಕಲಬುರಗಿ ನಗರದ ಬಡೇಪೂರ ಸರ್ವೆ ನಂ 54 ರಲ್ಲಿನ ಸಿ.ಎ. ನಿವೇಶನ ಸಂಖ್ಯೆ: 50 ರ ಅಂದಾಜು ಅಳತೆ 21824 ಚದರಡಿಯ ನಿವೇಶನದ ಗುತ್ತಿಗೆ ಅವಧಿಯನ್ನು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ (ನಾಗರಿಕ ಸೌಲಭ್ಯದ ನಿವೇಶನಗಳ ಹಂಚಿಕೆ) ನಿಯಮಗಳು 1991 ರ ನಿಯಮಾವಳಿಯಂತೆ 30 ವರ್ಷಗಳ ಗುತ್ತಿಗೆ ಅವಧಿ ಮುಗಿದ ನಂತರ ಪುನಃ ವಿಸ್ತರಿಸಲು ಹಾಗೂ ಸದರಿ ನಿವೇಶನಕ್ಕೆ ಪ್ರಾಧಿಕಾರ ನಿಗಧಿಪಡಿಸಿದ ಗುತ್ತಿಗೆ ಮೊತ್ತ ರೂ.98,20,800/- ರಲ್ಲಿ ಶೇ.10 ರಷ್ಟು ದರ ವಿಧಿಸಲು ಸರ್ಕಾರದ ಅನುಮೋದನೆ ನೀಡಿದೆ.

ಇದನ್ನು ಇತರೆ ಯಾವುದೇ ಪ್ರಕರಣದಲ್ಲಿ ಪೂರ್ವನಿದರ್ಶನವನ್ನಾಗಿ ಪರಿಗಣಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ.ರಾಜೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

(ಅಭಿವೃದ್ಧಿ ಪ್ರಾಧಿಕಾರ ಮತ್ತು ಮಂಡಳಿ)

ನಗರಾಭಿವೃದ್ಧಿ ಇಲಾಖೆ.

**PR. 77**
**SC.50**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬಾಗಲಕೋಟೆ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ಪರಿಷ್ಕೃತ–1) ನ್ನು ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಸಲ್ಲಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ನಅಇ/203/ಬೆಮಪ್ರಾ/2002, ಬೆಂಗಳೂರು, ದಿನಾಂಕ 19–10–2002,

2) ಸದಸ್ಯ–ಕಾರ್ಯದರ್ಶಿ, ನಗರ ಯೋಜನಾ ಪ್ರಾಧಿಕಾರ, ಬಾಗಲಕೋಟೆ ಇವರ ಪತ್ರ, ಸಂಖ್ಯೆ: ನಯೋ. ಪ್ರಾಬಾ/ಮಹಾ ಯೋಜನೆ/ ಅನುಮೋದನೆ/2015–16/67, ದಿನಾಂಕ 09–07–2015,

3) ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು, ಬೆಂಗಳೂರು ರವರ ಕಛೇರಿಯ ಏಕ ಕಡತ ಸಂ:ನಗ್ರಾಯೋ(6)/ಬಾಗಲಕೋಟೆ/ ಮಯೋ (ಪ)/ 2015–16.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಬಾಗಲಕೋಟೆ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ದಿನಾಂಕ:19.10.2002 ರಂದು ಅಂತಿಮ ಅನುಮೋದನೆ ನೀಡಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಬಾಗಲಕೋಟೆ ನಗರ ಯೋಜನಾ ಪ್ರಾಧಿಕಾರವು ಬಾಗಲಕೋಟೆ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಯನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13 (ಡಿ) ರನ್ವಯ ಪರಿಷ್ಕರಿಸಿ ಮಹಾ ಯೋಜನೆ (ಪರಿಷ್ಕೃತ–I)ಯನ್ನು ರೂಪಿಸಿ ಇದೇ ಕಾಯ್ದೆಯ ಕಲಂ 13(1)ರಡಿ ಸರ್ಕಾರದ ತಾತ್ಕಾಲಿಕ ಅನುಮೋದನೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿದೆ.

ಮೇಲೆ ಓದಲಾದ (3)ರ ಏಕ ಕಡತದಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು, ಬೆಂಗಳೂರು ರವರು ಬಾಗಲಕೋಟೆ ಪಟ್ಟಣದ ಜನಸಂಖ್ಯೆಯು 2031ನೇ ಇಸವಿಗೆ 2,50,000 ಗಳಿಗೆ ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾ ಯೋಜನೆ (ಪರಿಷ್ಕೃತ–I)ಯನ್ನು ರೂಪಿಸಲಾಗಿದೆ. ಬಾಗಲಕೋಟೆ ಪಟ್ಟಣದ ಜನಸಂಖ್ಯೆ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹಾಲಿ ಬೆಳವಣಿಗೆಯ ಗತಿ, ಹವಾಗುಣ, ರಸ್ತೆಗಳ ಹಾಲಿ ಪರಿಚಲನೆ ವ್ಯವಸ್ಥೆಯ ಸಮಸ್ಯೆಗಳನ್ನು ವಿಶ್ಲೇಷಿಸಿ ಯೋಜನಾ ತತ್ವಗಳಿಗನುಗುಣವಾಗಿ ಹಾಗೂ ಮಹಾ ಯೋಜನೆಯ ತಯಾರಿಕೆ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961 ರ ಪ್ರಕರಣ (9) ರಿಂದ (12) ರವರೆಗೆ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ, ನಗರದ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ ಒಟ್ಟು 5064.24 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 2557.01 ಹೆಕ್ಟೇರ್ (ಶೇ.50.49), ವಾಣಿಜ್ಯಕ್ಕಾಗಿ 210.43 ಹೆಕ್ಟೇರ್ (ಶೇ.4.16), ಕೈಗಾರಿಕೆಗಾಗಿ 488.00 ಹೆಕ್ಟೇರ್ (ಶೇ.9.64), ಸಾರ್ವಜನಿಕ:ಅರೆ ಸಾರ್ವಜನಿಕಕ್ಕೆ 488.66 ಹೆಕ್ಟೇರ್ (ಶೇ.9.64), ಉದ್ಯಾನವನ ಮತ್ತು ಬಯಲು ಜಾಗಗಳಿಗೆ 361.51 ಹೆಕ್ಟೇರ್ (ಶೇ.7.14), ಸಾರ್ವಜನಿಕ ಉಪಯುಕ್ತತೆಗಾಗಿ 62.36 ಹೆಕ್ಟೇರ್ (ಶೇ.1.23) ಹಾಗೂ ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 896.45 ಹೆಕ್ಟೇರ್ (ಶೇ.17.70) ಪ್ರದೇಶವನ್ನು ನಿಗದಿಪಡಿಸಲಾಗಿದೆ. ಮಹಾ ಯೋಜನೆ (ಪರಿಷ್ಕೃತ–I) ಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ. ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1) ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 371 ಬೆಮಪ್ರಾ 2015 .ದಿನಾಂಕ. 07.01.2016**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ (ಪರಿಷ್ಕೃತ–I)ಗೆ, ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)ರನ್ವಯ ತಾತ್ಕಾಲಿಕ ಅನುಮೋದನೆಯನ್ನು ಈ ಕೆಳಕಂಡ ನಿಬಂಧನೆಗೊಳಪಡಿಸಿ ಅನುಮೋದನೆ ನೀಡಿದೆ.

- ಆಲಮಟ್ಟಿ ಜಲಾಶಯದ ನೀರಿನ ಮಟ್ಟವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದ ದಾಖಲಾತಿಯನ್ವಯ ಅಳವಡಿಸಿಕೊಂಡು ಮಹಾಯೋಜನೆ (ಪರಿಷ್ಕೃತ–I)ನ್ನು ಸರ್ಕಾರದ ಅಂತಿಮ ಅನುಮೋದನೆಗೆ ಸಲ್ಲಿಸತಕ್ಕದ್ದು.
- ಘನತ್ಯಾಜ್ಯ ವಸ್ತು ಸಂಗ್ರಹಣಾ ಘಟಕದ ಹಾಗೂ ಸುತ್ತಲಿನ ಅಭಿವೃದ್ಧಿ ಕುರಿತು ರಾಜ್ಯ ಮಾಲಿನ್ಯ ನಿಯಂತ್ರಣಾ ಮಂಡಳಿಯ ನಿಯಮಾನುಸಾರ ಕ್ರಮ ಕೈಗೊಳ್ಳತಕ್ಕದ್ದು.

ಮಹಾ ಯೋಜನೆ (ಪರಿಷ್ಕೃತ–1)ಗೆ, ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ.ರಾಜೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**PR. 79**

**SC.150**

## COMMERCE & INDUSTRIES SECRETARIAT

**Sub**: Approval for Development of Machine Tool Industry Park (MTP) in Vasanthanarasapura, Tumakuru - reg.

**Read**: Letter of Managing Director, KSIIDC dated: 14.12.2015.

**Preamble:**

The proposal of Development of "Machine Tool Industry Park" (MTP) in Karnataka was taken up by Govt. of Karnataka in consultation with Indian Machine Tool Manufacturers Association (IMTMA) was agreed to, in principle in the meeting held on 10.09.2015

under the chairmanship of the Secretary (Heavy Industries), the Department of Heavy Industry, Government of India. The development of MTP is being taken up under the IIIFC scheme "Enhancement of Competitiveness in the Indian capital goods sector" for assistance to technology development / acquisition and services infrastructure of Ministry of Heavy Industry, Govt. of India. KIADB has already entrusted the work of Master Planning to M/s Gama Infratech, Bengaluru through tender on 09.09.2015. KSIIDC has taken up the review and finalization of DPR of MTP in Vasanthanarasapura, Tumakuru.

Managing Director, KSIIDC vide referred letter above has requested Government to issue Government Order on the following:

a) To go ahead with the master planning of MTP (preferably a G.O. for the development of MTP by KSIIDC).

b) To correspond with Ministry of Heavy Industry, GoI through ACS, C&I Dept. for the requirement of funds as per the above Scheme.

c) To acquire 54.92 acres of left out parcels of land inside the proposed machine tool industry park to have the contiguity and compactness.

d) Formation of SPV along with GoI, Indian Machine Tool Manufacturing Association (IMTMA) and other organizations.

Government has examined the proposal in all aspects and hence the following order.

**GOVERNMENT ORDER No. CI 135 SPI 2015, BENGALURU, DATED: 02.01.2016**

The Government is pleased to accord in principle approval for the following:

1. Karnataka State Industrial and Infrastructure Development Corporation (KSIIDC) is designated as the nodal agency for taking forward the development of MTP in Vasanthanarasapura, Tumakuru.
2. KSIIDC to correspond with Ministry of Heavy Industry, GoI through ACS, C&I Dept. for the requirement of funds as per the above scheme.

By Order and in the name of the Governor of Karnataka,

**S. UMADEVI**

Desk Officer (Technical Cell),

Commerce & Industries Department.

**PR. 76**

**SC.25**

## COMMERCE & INDUSTRIES SECRETARIAT

**Sub**: Amendment to earlier approved project proposal of M/s Asian Paints Ltd. to implement the project in two phases i.e. Phase 1 - 3 lakh KLPA & Phase 2 – 3 lakh KLPA – reg.

**Ref**:
1) Proceedings of the 32nd State High Level Clearance Committee (SHLCC) meeting held on 23.08.2013
2) Government Order No. CI 155 SPI 2013, dated: 27.09.2013.
3) Corrigendum No. CI 155 SPI 2013, dated: 09.10.2013.
4) Proceedings of the 35th State High Level Clearance Committee (SHLCC) meeting held on 14.05.2014.
5) Government Order No. CI 155 SPI 2013, dated: 26.06.2014
6) Government Order No. CI 155 SPI 2013, dated: 22.09.2014.
7) Government Order No. CI 155 SPI 2013, dated: 16.07.2015.Request from M/s Asian Paints Ltd., dated: 08.10.2015.

**Preamble:**

The Project proposal of M/s Asian Paints to establish a "6 Lakh KLPA capacity Integrated Paint & Resins / Emulsions Manufacturing Plant with 8 MW Solar Power Plant" at Kochanahalli Industrial Area in Mysore District with an investment of Rs. 2,300 crores was approved in 32nd SHLCC meeting held on 23.08.2013. The Government Order was issued vide Government Order No. CI 155 SPI 2013, dated: 27.09.2013 read at (2) above.

Further, the company vide letter dated: 31.07.2014 informed that they will implement the project in 2 Phases (Phase 1 – 4 lakh KLPA & Phase 2 – 2 lakh KLPA), instead of implementing in one phase as approved in the 32nd SHLCC meeting.

In the 35th SHLCC meeting held on 14.05.2014, the Committee has given powers to Additional Chief Secretary to Govt., Commerce & Industries Dept., to amend the Government Orders/approval letters, which require minor changes and to place such issues before the next SHLCC ratification. Accordingly, the Government Order was issued vide Government Order No. CI 155 SPI 2013, dated: 22.09.2014, permitting to implement the project in two phases (Phase 1 – 4 lakh KLPA & Phase 2 – 2 lakh KLPA) read at (6) above.

Now, the company vide their letter read at (8) above has informed that during the last one year demand conditions have not been very encouraging and outlook for the future has undergone some change and accordingly they have planned to implement the project in two phase i.e. Phase 1 – 3 lakh KLPA & Phase 2 – 3 lakh KLPA and requested for an amendment to the Government Order.

Government has examined the proposal in all aspects.

Hence the following order.

**GOVERNMENT ORDER No. CI 155 SPI 2013,BENGALURU, DATED: 29.12.2015**

In continuation of the Government Order read at (2) above, the Government is pleased to permit M/s Asian Paints Ltd. to implement the project in two phases i.e. Phase 1 - 3 lakh KLPA & Phase 2 – 3 lakh KLPA, with total investment of Rs. 2,300 crores.

All other terms and conditions indicated in the Government Order dated: 27.09.2013 read at (2) above, remain unaltered.

By Order and in the name of the Governor of Karnataka,

**S. UMADEVI**

Desk Officer (Technical Cell),

Commerce & Industries Department.

**PR. 57**

**SC.25**

## ಕಂದಾಯ ಸಚಿವಾಲಯ

**ವಿಷಯ:** ಬೆಳಗಾವಿ ನಗರದ ರಿ.ಸ.ನಂ.16ಅರಲ್ಲಿ 4–03 ಎಕರೆ ಜಮೀನನ್ನು ಆದಾಯ ತೆರಿಗೆ ಇಲಾಖೆಯ ಕಛೇರಿ ಕಟ್ಟಡ ಮತ್ತು ವಸತಿ ಗೃಹಗಳ ಕಟ್ಟಡಕ್ಕಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿ, ಬೆಳಗಾವಿ ಜಿಲ್ಲೆ ಇವರ ಪತ್ರ ಸಂಖ್ಯೆ: ಕಂಶಾ ಎಲ್‌ಜಿಎಲ್.ವಿವ.116/14–15 ದಿನಾಂಕ: 24.07.2015.
2. ಜಿಲ್ಲಾಧಿಕಾರಿ, ಬೆಳಗಾವಿ ಜಿಲ್ಲೆ ಇವರ ಪತ್ರ ಸಂಖ್ಯೆ: ಕಂಶಾ ಎಲ್‌ಜಿಎಲ್.ವಿವ.116/14–15, ದಿನಾಂಕ: 05.09.2015.
3. ಸರ್ಕಾರದ ಪತ್ರ ಸಂಖ್ಯೆ: ಕಂಇ 15 ಎಲ್‌ಜಿಎಲ್ 2015, ದಿನಾಂಕ: 26.11.2015.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಜಿಲ್ಲಾಧಿಕಾರಿ, ಬೆಳಗಾವಿ ಜಿಲ್ಲೆ ಇವರು ದಿನಾಂಕ: 27.02.2015ರ ಆದೇಶದಲ್ಲಿ ಬೆಳಗಾವಿ ನಗರದ ರಿ.ಸ.ನಂ.1350ರಲ್ಲಿ 04–20 ಎಕರೆ ಜಮೀನನ್ನು ಆದಾಯ ತೆರಿಗೆ ಇಲಾಖೆಯ ಕಛೇರಿ ಕಟ್ಟಡ ಮತ್ತು ಅಧಿಕಾರಿಗಳು/ಸಿಬ್ಬಂದಿಗಳಿಗೆ ವಸತಿ ನಿಲಯ ಕಟ್ಟಡ ನಿರ್ಮಾಣಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರಡಿ ಕಾಯ್ದಿರಿಸಿ ಆದೇಶಿಸಿದ್ದು, ಸರ್ಕಾರದ ಮುಖ್ಯ ಕಾರ್ಯದರ್ಶಿಗಳೊಡನೆ ಜಿಲ್ಲಾಧಿಕಾರಿ, ಹಾಗೂ ಆದಾಯ ತೆರಿಗೆ ಇಲಾಖೆಯ ಅಧಿಕಾರಿಗಳು ದಿನಾಂಕ: 07.07.2015ರಂದು ಸ್ಥಳ ವೀಕ್ಷಣೆ ಮಾಡಿ ಬೆಳಗಾವಿ ರಿ.ಸ.ನಂ.1350ರಲ್ಲಿನ ಜಮೀನು ಪ್ರಸ್ತಾಪಿತ ಉದ್ದೇಶಕ್ಕೆ ಸೂಕ್ತವಾಗಿರುವುದಿಲ್ಲವೆಂದು ತೀರ್ಮಾನಿಸಿದ್ದರಿಂದ ಬೆಳಗಾವಿ ಜಿಲ್ಲೆ ಬೆಳಗಾವಿ ಗ್ರಾಮದ ರಿ.ಸ.ನಂ.16ಅರಲ್ಲಿ ವಿಸ್ತೀರ್ಣ 04–03 ಎಕರೆ ಜಮೀನನ್ನು ಮಂಜೂರು ಮಾಡಲು ಪ್ರಸ್ತಾಪಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ಜಿಲ್ಲಾಧಿಕಾರಿ, ಬೆಳಗಾವಿ ಇವರು ಕೇಂದ್ರ ಸರ್ಕಾರದ ವಿತ್ತ ಮಂತ್ರಾಲಯದ ಕಂದಾಯ ಕಾರ್ಯದರ್ಶಿಯವರ ಪತ್ರವನ್ನು ಉಲ್ಲೇಖಿಸಿ, ಬೆಳಗಾವಿ ನಗರದಲ್ಲಿ ಆದಾಯ ತೆರಿಗೆ ಇಲಾಖೆಯು ಕಂಟೋನ್ಮೆಂಟ್ ಬೋರ್ಡ್‌ವ್ಯಾಪ್ತಿಯಲ್ಲಿ ಹೊಂದಿರುವ 4–20 ಎಕರೆ ಜಮೀನನ್ನು ಕೋಟೆ ಕೆರೆ ಸಂರಕ್ಷಣೆ ಉದ್ದೇಶದಿಂದ ಕಂದಾಯ ಇಲಾಖೆಯು ಪಡೆದುಕೊಂಡು ಬದಲಿಯಾಗಿ ಬೆಳಗಾವಿ ನಗರದ ರಿ.ಸನಂ.16ಅರಲ್ಲಿ 4–03 ಎಕರೆ ಜಮೀನನ್ನು ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (3)ರ ಪತ್ರದಲ್ಲಿ ಜಿಲ್ಲಾಧಿಕಾರಿ, ಬೆಳಗಾವಿ ಜಿಲ್ಲೆ ಇವರ ಆದೇಶ ಸಂಖ್ಯೆ: ಕಂಶಾ/ಎಲ್‌ಜಿಎಲ್/ವಿವ/116/2014–15 ದಿನಾಂಕ: 27.02.2015ರ ಆದೇಶದಲ್ಲಿ ಬೆಳಗಾವಿ ನಗರದ ರಿ.ಸ.ನಂ1350ರಲ್ಲಿ 4–20 ಎಕರೆ ಜಮೀನನ್ನು ಆದಾಯ ತೆರಿಗೆ ಇಲಾಖೆಯ ಕಛೇರಿ ಕಟ್ಟಡ ಮತ್ತು ಅಧಿಕಾರಿಗಳು/ಸಿಬ್ಬಂದಿಗಳಿಗೆ ವಸತಿ ನಿಲಯ ಕಟ್ಟಡ ನಿರ್ಮಾಣಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ.71ರಡಿ ಕಾಯ್ದಿರಿಸಿ ಆದೇಶಿಸಿರುವುದನ್ನು ರದ್ದು ಮಾಡಿ, ಪ್ರಸ್ತುತ ಆದಾಯ ತೆರಿಗೆ ಇಲಾಖೆಯು ಹೊಂದಿರುವ ಜೆ.ಎಲ್.ಆರ್.ರಿ.ಸ.ನಂ.324ರಲ್ಲಿನ 4–20 ಎಕರೆ ಜಮೀನಿಗೆ ಬದಲಿಯಾಗಿ ಬೆಳಗಾವಿ ಗ್ರಾಮದ ರಿ.ಸ.ನಂ.16ಅರಲ್ಲಿನ ವಿಸ್ತೀರ್ಣ 4–03 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರಡಿ ಕಾಯ್ದಿರಿಸಲು ಸರ್ಕಾರದ ಪೂರ್ವಾನುಮೋದನೆ ನೀಡಲಾಗಿತ್ತು.

ಜಿಲ್ಲಾಧಿಕಾರಿ, ಬೆಳಗಾವಿ ಇವರು ದಿನಾಂಕ: 05.09.2015ರ ಪತ್ರದಲ್ಲಿ ಕೋರಿರುವಂತೆ ಸದರಿ ಕಾಯ್ದಿರಿಸಿರುವ ಬದಲಿ ಜಮೀನನ್ನು ಪ್ರಸ್ತುತ ಆದಾಯ ತೆರಿಗೆ ಇಲಾಖೆಯು ಈಗಾಗಲೇ ಹೊಂದಿರುವ ಜಮೀನಿಗೆ ಬದಲಿಯಾಗಿ ಮಂಜೂರಾತಿ ನೀಡುವಂತೆ ಕೋರಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 15 ಎಲ್‌ಜಿಎಲ್ 2015, ಬೆಂಗಳೂರು, ದಿನಾಂಕ: 19.12.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಳಗಾವಿ ಜಿಲ್ಲೆ, ಬೆಳಗಾವಿ ನಗರದ ರಿ.ಸ.ನಂ.16ಅರಲ್ಲಿ ಕಾಯ್ದಿರಿಸಲಾದ ವಿಸ್ತೀರ್ಣ 4–03 ಎಕರೆ ಜಮೀನನ್ನು ಆದಾಯ ತೆರಿಗೆ ಇಲಾಖೆಯು ಪ್ರಸ್ತುತ ಹೊಂದಿರುವ ಸ.ನಂ.ಜಿಎಲ್‌ಆರ್.ರಿ.ಸ.ನಂ.324ರಲ್ಲಿ ವಿಸ್ತೀರ್ಣ 4–20 ಎಕರೆ ಜಮೀನಿನ ಬದಲಿಗೆ ಆದಾಯ ತೆರಿಗೆ ಇಲಾಖೆಯ ಕಛೇರಿ ಕಟ್ಟಡ ಮತ್ತು ಅಧಿಕಾರಿಗಳು/ಸಿಬ್ಬಂದಿಗಳಿಗೆ ವಸತಿ ನಿಲಯ ಕಟ್ಟಡ ನಿರ್ಮಾಣಕ್ಕಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 27ರಡಿ ಈ ಕೆಳಕಂಡ ಷರತ್ತುಗಳೊಂದಿಗೆ ಮಂಜೂರು ಮಾಡಿ ಆದೇಶಿಸಿದೆ.

**ಷರತ್ತುಗಳು:**

1. ಜಿಲ್ಲಾಧಿಕಾರಿ, ಬೆಳಗಾವಿ ಜಿಲ್ಲೆ ಇವರು ಪ್ರಸ್ತಾವಿತ ಜಮೀನುಗಳ ಅದಲು ಬದಲು ಪ್ರಕ್ರಿಯೆಯನ್ನು ನಿಯಮಾನುಸಾರ ಕೈಗೊಳ್ಳತಕ್ಕದ್ದು.
2. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
3. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಹಾಂತೇಗೌಡ ಎಸ್.ಎಲ್.,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3)

**PR. 63**

**SC.25**

## ಕಂದಾಯ ಸಚಿವಾಲಯ

**ವಿಷಯ:–** ಮೈಸೂರು ಜಿಲ್ಲೆ, ಮೈಸೂರು ತಾಲ್ಲೂಕು, ವರುಣಾ ಹೋಬಳಿ, ವರುಣಾ ಗ್ರಾಮದ ಸ.ನಂ: 140 ರಲ್ಲಿ 6–20 ಎಕರೆ ಮತ್ತು ಚೋರನಹಳ್ಳಿ ಗ್ರಾಮದ ಸ.ನಂ.27 ರಲ್ಲಿ 8.20 ಎಕರೆ ಒಟ್ಟು 15–00 ಎಕರೆ ಸರ್ಕಾರಿ ಜಮೀನನ್ನು ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ, ಮೈಸೂರು ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:–** ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ರವರ ಪತ್ರ ಸಂಖ್ಯೆ: ಎಲ್ಎನ್‌ಡಿ(2)ಸಿಆರ್:59/2013–14 ದಿನಾಂಕ 03–04–2014 ಮತ್ತು 25–05–2015.

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರಗಳಲ್ಲಿ ಪ್ರಾದೇಶಿಕ ಆಯುಕ್ತರು ಮೈಸೂರು ವಿಭಾಗ ಮೈಸೂರು ಇವರು ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ, ನೈಮಿಶಮ್ ಆವರಣ, ಮಾನಸ ಗಂಗೋತ್ರಿ, ಮೈಸೂರು ಇವರಿಗೆ ಮೈಸೂರು ಜಿಲ್ಲೆ, ಮೈಸೂರು ತಾಲ್ಲೂಕು, ವರುಣಾ ಹೋಬಳಿ ವರುಣಾ ಗ್ರಾಮದ ಸ.ನಂ. 140 ರಲ್ಲಿ 6–20 ಎಕರೆ ಮತ್ತು ಚೋರನಹಳ್ಳಿ ಗ್ರಾಮದ ಸ.ನಂ. 27 ರಲ್ಲಿ 8–20 ಎಕರೆ ಒಟ್ಟು 15–00 ಎಕರೆ ಸರ್ಕಾರಿ ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಅಖಿಲ ಭಾರತ ವಾಕ್ ಶ್ರವಣಸಂಸ್ಥೆ, ನೈಮಿಶಮ್ ಆವರಣ, ಮಾನಸ ಗಂಗೋತ್ರಿ, ಮೈಸೂರು ಇವರ ಪತ್ರ ಸಂಖ್ಯೆ:ಎಸ್‌ಹೆಚ್/ಡಿಐಆರ್/ಲ್ಯಾಂಡ್/ಜಿ 63/2012–13 ದಿನಾಂಕ:26–12–2012 ರಲ್ಲಿ ಸಂಸ್ಥೆಯವರಿಗೆ 20 ಎಕರೆ ಜಮೀನನ್ನು ಮೂಫ್ತಾಗಿ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಸದರಿ ಕೋರಿಕೆಯ ಬಗ್ಗೆ ಜಿಲ್ಲಾಧಿಕಾರಿ ಮೈಸೂರು ಜಿಲ್ಲೆ, ಮೈಸೂರು ಇವರು ತಮ್ಮ ವರದಿಯಲ್ಲಿ, ಮೈಸೂರು ತಾಲ್ಲೂಕು, ವರುಣಾ ಹೋಬಳಿ, ಚೋರನಹಳ್ಳಿ ಗ್ರಾಮದ ಸ.ನಂ. 27 ರಲ್ಲಿ 26–13 ಎಕರೆ ಪೈಕಿ 8–20 ಹಾಗೂ ಸ.ನಂ.140 ರಲ್ಲಿ 11–06 ಎಕರೆ ಪೈಕಿ 6–20 ಎಕರೆ ಒಟ್ಟು 15–00 ಎಕರೆ ಜಮೀನು ಆರ್.ಟಿ.ಸಿ ಯಂತೆ ಸರ್ಕಾರಿ ಗೋಮಾಳ ಹಾಗೂ ಸರ್ಕಾರಿ ಖರಾಬು ಆಗಿದ್ದು ಅದರಲ್ಲಿ ಯಾವುದೇ ರೀತಿಯ ಕಟ್ಟಡಗಳು ಹಾಗೂ ಬೆಲೆಬಾಳುವ ಮರ ಮಾಲ್ಕಿಗಳು ಇರುವುದಿಲ್ಲ ಹಾಗೂ ಈ ಹಿಂದೆ ಬೇರೆ ಯಾವುದೇ ಸಾರ್ವಜನಿಕ ಉದ್ದೇಶಕ್ಕೆ ಕಾಯ್ದಿರಿಸಿರುವುದಿಲ್ಲ ಮತ್ತು ಸದರಿ ಜಮೀನು ಪಂಚಾಯತಿ ವ್ಯಾಪ್ತಿಯಲ್ಲಿ ಇರದಿರುವ ಕಾರಣ ಈ ಕುರಿತು ಗ್ರಾಮಸ್ಥರು ಸಹ ಯಾವುದೇ ತಂಟೆ ತಕರಾರುಗಳು ಇರುವುದಿಲ್ಲ ಹಾಗೂ ಸದರಿ ಜಮೀನಿನಲ್ಲಿ ಯಾವುದೇ ರೀತಿಯ ಹೆಚ್ಚಿನ ವಿದ್ಯುತ್ ವಾಹಕ ತಂತಿ ಹಾದು ಹೋಗಿರುವುದಿಲ್ಲ ಎಂದು ತಿಳಿಸಿರುತ್ತಾರೆ.

ಮುಂದುವರೆದು, ಮೈಸೂರು ತಾಲ್ಲೂಕು, ವರುಣಾ ಹೋಬಳಿ, ವರುಣಾ ಗ್ರಾಮದ ಸ.ನಂ.140 ರಲ್ಲಿ 11–06 ಎಕರೆ ಸರ್ಕಾರಿ ಖರಾಬು ಜಮೀನೆಂದು ಮತ್ತು ಚೋರನಹಳ್ಳಿ ಗ್ರಾಮದ ಸ.ನಂ. 27 ರಲ್ಲಿ 26–13 ಎಕರೆ ಸರ್ಕಾರಿ ಗೋಮಾಳ ಜಮೀನೆಂದು ಆರ್.ಟಿ.ಸಿ.ಯಲ್ಲಿ ನಮೂದಾಗಿದೆ. ಸಹಾಯಕ ನಿರ್ದೇಶಕರು, ನಗರ ಪಶು ಆಸ್ಪತ್ರೆ, ಮೈಸೂರು ಇವರು ದಿನಾಂಕ:10–12–2013 ರಲ್ಲಿ ನೀಡಿರುವ ಮಾಹಿತಿ ಪ್ರಕಾರ, ಸದರಿ ಪ್ರದೇಶದಲ್ಲಿ ಗೋಮಾಳದಲ್ಲಿ ಮೇಯಲು ಇರುವ ಜಾನುವರುಗಳ ಸಂಖ್ಯೆ 914 ಆಗಿದ್ದು, ಅವುಗಳ ಮೇವಿಗಾಗಿ ಜಮೀನು ಲಭ್ಯವಿದ್ದು, ಯಾವುದೇ ರೀತಿಯ ತೊಂದರೆ ಇರುವುದಿಲ್ಲ ಎಂದು ತಿಳಿಸಿರುತ್ತಾರೆ. ಆದ್ದರಿಂದ ಕರ್ನಾಟಕ ಭೂ ಕಂದಾಯ ಅಧಿನಿಯಮ 1964 ಕಲಂ 97(4) ರ ಪ್ರಕಾರ ಗೋಮಾಳ ಶೀರ್ಷಿಕೆಯಿಂದ ಕಡಿಮೆ ಮಾಡಿ ಆದೇಶ ಹೊರಡಿಸಬೇಕಾಗಿರುತ್ತದೆ.

ಸದರಿ ಸಂಸ್ಥೆಯು ಕೇಂದ್ರ ಸರ್ಕಾರದ ಸ್ವಾಯತ್ತ ಸಂಸ್ಥೆಯಾಗಿದ್ದು, ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯದ ವ್ಯಾಪ್ತಿಯಲ್ಲಿದೆ. ಆದುದರಿಂದ ಸದರಿ ಸಂಸ್ಥೆಯವರು ಉಚಿತವಾಗಿ ಜಮೀನು ಮಂಜೂರು ಮಾಡಲು ಕೋರಿರುತ್ತಾರೆ.

ಪ್ರಸ್ತಾವನೆ ಕುರಿತು ಹೊಸ ಭೂ ನೀತಿಯಡಿಯಲ್ಲಿ ಪರೀಶೀಲಿಸಲಾಗಿ, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 22ಎ (3) (iv) ರಲ್ಲಿ ಕೇಂದ್ರ ಸರ್ಕಾರ ಹಾಗೂ ಕೇಂದ್ರ ಸರ್ಕಾರದ ಸಾರ್ವಜನಿಕ ಉದ್ಯಮ ಒಳಗೊಂಡಿರುವ ಸಂಸ್ಥೆಗಳಿಗೆ ರಾಜ್ಯ ಸರ್ಕಾರದ ಹಿತದೃಷ್ಟಿಯಿಂದ ಹಾಗೂ ರಾಜ್ಯ ಸರ್ಕಾರಕ್ಕೆ ನೇರವಾಗಿ ಉಪಯೋಗವಾಗುತ್ತಿದ್ದರೆ ಅಂತಹ ಉದ್ದೇಶಕ್ಕೆ ಜಮೀನನ್ನು ಉಚಿತವಾಗಿ ಮಂಜೂರು ಮಾಡಲು ಅವಕಾಶವಿರುತ್ತದೆ. ಈ ಸಂಸ್ಥೆಗೆ ಜಮೀನು ಮಂಜೂರು ಮಾಡುವುದರಿಂದ ರಾಜ್ಯದ ಸಾರ್ವಜನಿಕರಿಗೆ ಅದರಲ್ಲೂ ವಿಶೇಷವಾಗಿ ಕಿವುಡ ಮತ್ತು ಮೂಕ ಜನರಿಗೆ ಉಪಯೋಗವಾಗುತ್ತದೆ.

ಮೇಲ್ಕಂಡ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 52 ಎಲ್‌ಜಿಎಂ 2014, ದಿನಾಂಕ: 02.12.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮೈಸೂರು ಜಿಲ್ಲೆ, ಮೈಸೂರು ತಾಲ್ಲೂಕು, ವರುಣಾ ಹೋಬಳಿ, ವರುಣಾ ಗ್ರಾಮದ ಸ.ನಂ: 140 ರಲ್ಲಿ 6–20 ಎಕರೆ ಮತ್ತು ಚೋರನಹಳ್ಳಿ ಗ್ರಾಮದ ಸ.ನಂ.27 ರಲ್ಲಿ 8.20 ಎಕರೆ ಒಟ್ಟು 15–00 ಎಕರೆಗಳ ಪೈಕಿ 10–00 ಎಕರೆ ಸರ್ಕಾರಿ ಗೋಮಾಳ ಮತ್ತು ಸರ್ಕಾರಿ ಖರಾಬು ಜಮೀನನ್ನು ಕರ್ನಾಟಕ ಭೂ ಮಂಜೂರಾತಿ (ತಿದ್ದುಪಡಿ) ನಿಯಮಗಳು 2015ರ ನಿಯಮ 22ಎ(3)(iv) ರನ್ವಯ ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ, ಮೈಸೂರು ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಉಚಿತವಾಗಿ ಮಂಜೂರು ಮಾಡಿ ಆದೇಶಿಸಿದೆ.

1. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.

2. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
6. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
7. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
8. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
9. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
10. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉದಯ ಆರ್. ನಾಯಕ್**

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ.ಮಂ–2)

**PR. 22**

**SC. 50**

## ಕಂದಾಯ ಸಚಿವಾಲಯ

**ವಿಷಯ:–** ಬಳ್ಳಾರಿ ನಗರದ ವಾರ್ಡ್ ನಂ.21, ಬ್ಲಾಕ್ ನಂ.7, ಟಿ.ಎಸ್. ನಂ.171ರಲ್ಲಿ 7320 ಚದರ ಅಡಿ ಸ್ಥಳವನ್ನು ಯೂತ್ ಪ್ರೇಯರ್ ಫೆಲೋಷಿಪ್ ಟ್ರಸ್ಟ್, ಬಳ್ಳಾರಿ ಇವರಿಗೆ ಚರ್ಚ್‌ನಲ್ಲಿ ಪ್ರಾರ್ಥನೆ ಉದ್ದೇಶಕ್ಕಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:–** ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ, ಇವರ ಪತ್ರ ಸಂಖ್ಯೆ: ಕಂ/ಪ.ನಿ./31/12–13, ದಿನಾಂಕ:12.02.2013.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ, ಜಿಲ್ಲಾಧಿಕಾರಿಗಳು, ಬಳ್ಳಾರಿ ಇವರು ಬಳ್ಳಾರಿ ನಗರದ ಟಿ.ಎಸ್.ನಂ.171, ಬ್ಲಾಕ್ 07, ವಾರ್ಡ್ 21ರಲ್ಲಿ 7320 ಚದರ ಅಡಿ ಸ್ಥಳವನ್ನು ಬಳ್ಳಾರಿ ಯೂತ್ ಪ್ರೇಯರ್ ಫೆಲೋಷಿಪ್ ಟ್ರಸ್ಟ್, ಬಳ್ಳಾರಿ ಇವರಿಗೆ ಚರ್ಚ್‌ನಲ್ಲಿ ಪ್ರಾರ್ಥನೆ ಉದ್ದೇಶಕ್ಕಾಗಿ ಮಂಜೂರು ಮಾಡುವ ಕುರಿತು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಪ್ರಸ್ತಾಪಿತ ಜಮೀನು ಆಸ್ತಿ ಪ್ರಕಟಣೆ ಪ್ರಕಾರ 'ಗ್ರಾಮ ಕಂಠಂ' ಎಂದು ವರ್ಗೀಕೃತವಾಗಿದ್ದು, ಆದರೂ ಸರ್ಕಾರಿ ಜಮೀನಾಗಿರುತ್ತದೆ. ಪ್ರಸ್ತಾಪಿತ ಜಮೀನಿನಲ್ಲಿ ಈಗಾಗಲೇ ಅನಧಿಕೃತವಾಗಿ ಚರ್ಚ್ ಕಟ್ಟಡ ನಿರ್ಮಾಣಗೊಂಡಿರುತ್ತದೆಂದು ಹಾಗೂ ಸದರಿ ಜಮೀನಿನ ಮೇಲೆ ಯಾರೂ ಅಕ್ರಮ–ಸಕ್ರಮ ಅರ್ಜಿ ಸಲ್ಲಿಸಿರುವುದಿಲ್ಲವೆಂದು ಜಿಲ್ಲಾಧಿಕಾರಿಗಳು ವರದಿ ಮಾಡಿರುತ್ತಾರೆ.

ಮುಂದುವರೆದು ಪಾದ್ರಿಗಳು, ಬಳ್ಳಾರಿ ಯೂತ್ ಪ್ರೇಯರ್ ಫೆಲೋಷಿಪ್ ಟ್ರಸ್ಟ್, ಬಳ್ಳಾರಿ ಇವರು ತಹಶೀಲ್ದಾರ್, ಬಳ್ಳಾರಿ ಇವರಿಗೆ ದಿನಾಂಕ:10.11.2014ರಂದು ಮನವಿಯನ್ನು ಸಲ್ಲಿಸಿ ಸದರಿ ಚರ್ಚಿನ ಪ್ರಾರ್ಥನಾ ಮಂದಿರದಲ್ಲಿ ಪ್ರತಿ ಭಾನುವಾರ ಸಾಮೂಹಿಕ ಪ್ರಾರ್ಥನೆ ಮತ್ತು ಸಂಗೀತ ಕಾರ್ಯಕ್ರಮವನ್ನು ನಡೆಸಲಾಗುತ್ತಿದೆ ಎಂದು ತಿಳಿಸಿದ್ದಾರೆ. ಅಲ್ಲದೆ, ಸದರಿ ಟ್ರಸ್ಟಿನ ವತಿಯಿಂದ ವಿಧವೆಯರಿಗೆ ಹಾಗೂ ವೃದ್ದರಿಗೆ ಸಮಾಜ ಸೇವಾ ಕಾರ್ಯವನ್ನು ನಡೆಸುತ್ತಿದ್ದು, ಹೆಚ್.ಐ.ವಿ ಪೀಡಿತರಿಗೆ ಸಹಾಯಹಸ್ತ ನೀಡುವಂತಹ ಅನೇಕ ರೀತಿಯ ಆರೋಗ್ಯ ಸುಧಾರಣೆ ಕಾರ್ಯಕ್ರಮಗಳಲ್ಲಿ ಸಹ ಅದು ತೊಡಗಿದೆಂದು ತಿಳಿಸಿರುತ್ತಾರೆ. ಸದರಿ ಟ್ರಸ್ಟ್‌ರವರು ಕಳೆದ 5 ವರ್ಷಗಳ ಆಡಿಟ್ ವರದಿಗಳನ್ನು ಸಲ್ಲಿಸುತ್ತಾ ಪ್ರಸ್ತಾಪಿತ ಜಮೀನನ್ನು ಮಂಜೂರು ಮಾಡಬೇಕೆಂದು ಕೋರಿರುತ್ತಾರೆಂದು ವರದಿಯಲ್ಲಿ ತಿಳಿಸಿರುತ್ತಾರೆ.

ಮುಂದುವರೆದು, ಪ್ರಸ್ತುತ ಮಾರ್ಗಸೂಚಿ ಬೆಲೆಯ ಪ್ರಕಾರ ಸದರಿ ಪ್ರದೇಶದಲ್ಲಿ ಪ್ರತಿ ಚದರ ಅಡಿ ವಾಣಿಜ್ಯ ಉದ್ದೇಶಕ್ಕಾಗಿ ರೂ.1080/–ಗಳಷ್ಟಿದ್ದು ಹಾಗೂ ವಸತಿ ಉದ್ದೇಶಕ್ಕಾಗಿ ಪ್ರತಿ ಚದರ ಅಡಿ ಬೆಲೆ ರೂ. 400/–ಗಳಾಗಿದೆ ಎಂದು ಉಪನೋಂದಣಾಧಿಕಾರಿಗಳು, ಬಳ್ಳಾರಿ ಇವರು ವರದಿ ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 14 ಎಲ್‌ಜಿಇ 2013, ಬೆಂಗಳೂರು, ದಿನಾಂಕ: 21.10.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಬಳ್ಳಾರಿ ಜಿಲ್ಲೆ, ಬಳ್ಳಾರಿ ನಗರದ ವಾರ್ಡ್ ನಂ.21, ಬ್ಲಾಕ್ ನಂ.7, ಟಿ.ಎಸ್.ನಂ.171ರಲ್ಲಿ 7,320 ಚದರ ಅಡಿ ಸ್ಥಳವನ್ನು ಬಳ್ಳಾರಿ ಯೂತ್ ಪ್ರೇಯರ್ ಫೆಲೋಷಿಪ್ ಟ್ರಸ್ಟ್, ಬಳ್ಳಾರಿ ಇವರಿಗೆ ಚರ್ಚ್ ಪ್ರಾರ್ಥನಾ ಮಂದಿರಕ್ಕಾಗಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 22ಎರಡಿ ಮಾರ್ಗಸೂಚಿ ಬೆಲೆಯ ಶೇ.10ರಷ್ಟನ್ನು ವಿಧಿಸಿ, ಈ ಕೆಳಕಂಡ ಷರತ್ತುಗಳೊಂದಿಗೆ ಮಂಜೂರು ಮಾಡಿ ಆದೇಶಿಸಿದೆ.

**ಷರತ್ತುಗಳು**

1) ಜಮೀನು ಹಸ್ತಾಂತರ ಪ್ರಕ್ರಿಯೆಯನ್ನು ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರು ನಿಯಮಾನುಸಾರ ನಿರ್ವಹಿಸಲು ನಿರ್ದೇಶನ ನೀಡಿದೆ.

2) ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.

3) ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

4) ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ / ಉಪಗುತ್ತಿಗೆ ನೀಡುವುದಾಗಲಿ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು. ಹಾಗೂ ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.

5) ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

6) ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಹಾಂತೇಗೌಡ ಎಸ್.ಎಲ್**

**PR. 23** ಸರ್ಕಾರದ ಅಧೀನ ಕಾರ್ಯದರ್ಶಿ

**SC. 25** ಕಂದಾಯ ಇಲಾಖೆ (ಭೂ ಮಂಜೂರಾತಿ–3)

## IT, BT AND S & T SECRETARIAT

**Subject:** Karnataka Start-up Policy 2015-2020.

**Preamble:**

Karnataka through its policies, in IT and BT and other sectors has been contributing to the creation of a conducive eco-system for the growth of industries in the State. The existence of reputed R & D institutions, premier educational institutions and close collaboration between the academia, the Industry and the Government has made Bengaluru and Karnataka a thriving hub for Startups. As per the Global Startup Eco-system Ranking Report 2015, Bengaluru is one of the top twenty ecosystems in the world.

2. Recognising the need to promote innovation and to encourage the growth of Startups, the Government of Karnataka decided to formulate a Startup Policy. This policy is expected to stimulate the growth of technology-based Startups within the State; help in retaining the position that Bengaluru enjoys and leverage the same to build similar eco-systems in two-tier cities in the State. The contents of Startup policy have been discussed with industry bodies, associations and representative group of Startups to obtain feedback on the measuresw and strategies to promote and encourage Startups. On the basis of the inputs received, the draft Startup policy has been finalized, as in Annexure.

3. the Startup policy proposes strategies like Encouraging Entrepreneurship in education through assistance to professional and post graduate institutions to set up incubation centres as a part of New Age Incubation Network; supporting establishment of technology business incubators in institutions of higher learning; providing early stage/idea to proof of concept funding to Startups;l creation of incubation infrastructure throuth PPP; funding of Startups through Fund of Funds; channelizing Innovation for Social Impact; promoting Capacity Building through exposure visits and workshops, Providing State support in the form of incentives and concessions etc.

4. Hence the order.

**GOVERNMENT ORDER NO.ITD 27 PRM 2015 DATED: 27.11.2015.**

In the circumstances explained above, Government are pleased to announce the Karnataka Start-up Policy 2015-2020 as annexed to this Government Order.

2. Karnataka Start-pu Policy 2015-2020 shall come into force with immediate effect and shall remain inforce for a period of five years or til its revision. The policy shall be applicable to Startups in various sectors including IT, BT manufacturing etc. The Implementation of the Policy in respect of IT, BT and ESDM sectors shall be the responsibility of Department of IT, BT and S & T and in respect of manufacturing sectors. coming under the Department of Commerce and Industries, the implementation of the policy shall be the responsibility of Department of Commerce and Industries.

3. A Startup Council shall be setup under the chairmanship of the Chief Minister with the Ministers for Commerce and Industries and IT, BT and S& T and senior officers of the Government and 10 Industry experts as members to review the implementation of the Startup policy. Equal representation shall be given to varios domains like ICT, Animation and Gaming, Agri-Biotechnology, Health, BFSI, ESDM and other manufacturing. The Council shall meet atleast once a year. Separate orders will be issued in this regard by the Department of IT, BT and S & T.

4. A Startup Policy Monitoring and Review Committee shall be setup under the chairmanship of Chief Secretary with Principal Secretary, IT, BT and S & T, Commissioner for Industrial Development and Director of Industries and Commerce, Managing Directors of KSIIDC, VTPC, Director-IT and BT and two-three outside experts as members with the managing Director, KBITS as the convenor.

5. Detailed operational guidelines shall be put in place for administering all the programs under this Policy and the same shall be reviewed annually.

6. To facilitate hand-holding of new ventures, mostly started by people with little prior knowledge of corporate affairs, a Startup Cell' shall be established in KBITS to act as a one stop shop that enables easy flow of information and assistance to the needy Startups. The Cell shall act as a single connect with Government Departments.

7. The Department of Commerce and Industries shall setup a separate Startup Cell in respect of the manufacturing sectors coming under its purview.

8. This order issues with the concurrence of finance deparment vide their U.O Note No: FD 319 Exp-2/2015 dated: 15.10.2015.

By Order and in the name of the Governor of Karnataka

**V. Manjula**

Principal Secretary to Government

Department of IT, BT and S & T

**PR. 40**

**SC. 200**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಕು. ಶೃತಿ. ಎ., ಇವರಿಗೆ 2008–09 ನೇ ಸಾಲಿನ ಪ್ರಥಮ ವರ್ಷದ ಎಂಬಿಬಿಎಸ್ ಕೋರ್ಸಿನ ಬೋಧನಾ ಶುಲ್ಕ ಮರುಪಾವತಿ ಸಂಬಂಧ ವಿಳಂಬ ಮನ್ನಾ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇವರ ಪತ್ರ ಸಂಖ್ಯೆ: ಎಂಇಎಸ್/126/2010–11, ದಿನಾಂಕ: 10–12–2013.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇವರು ಕುಮಾರಿ ಶೃತಿ. ಎ., ಇವರು ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದು, 2008–09 ನೇ ಸಾಲಿಗೆ ವೈದೇಹಿ ಮೆಡಿಕಲ್ ಕಾಲೇಜು, ಬೆಂಗಳೂರು ಈ ಸಂಸ್ಥೆಯಲ್ಲಿ ಎಂಬಿಬಿಎಸ್ ಕೋರ್ಸಿಗೆ ಸರ್ಕಾರಿ ಕೋಟಾದಡಿ ಸಿಇಟಿ ಮೂಲಕ ಪ್ರವೇಶ ಪಡೆದಿರುತ್ತಾರೆ. ಆದರೆ 2008–09 ನೇ ಸಾಲಿಗೆ ಸಕಾಲದಲ್ಲಿ ಶುಲ್ಕ ಮರುಪಾವತಿ ಕೋರಿ ಈ ನಿರ್ದೇಶನಾಲಯಕ್ಕೆ ಅರ್ಜಿ ಸಲ್ಲಿಸಲು ಸಾಧ್ಯವಾಗದೆ, ಹಾಲಿ ವರ್ಷದಲ್ಲಿ ಶುಲ್ಕವನ್ನು ಮಂಜೂರು ಮಾಡುವಂತೆ ಕೋರಿ ಮನವಿಯನ್ನು ಸಲ್ಲಿಸಿರುತ್ತಾರೆ. ಆದರೆ ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 229 ಬಿಸಿಎ 80, ದಿನಾಂಕ: 16.12.1982 ರಂತೆ ಆಯಾ ಆರ್ಥಿಕ ವರ್ಷ ಮುಗಿದ ನಂತರ ಹಿಂದಿನ ವರ್ಷದ ಮಂಜೂರಾತಿಯನ್ನು ಹಾಲಿ ವರ್ಷದಲ್ಲಿ ಮಾಡಲು ಈ ನಿರ್ದೇಶನಾಲಯದಲ್ಲಿ ಅವಕಾಶವಿರುವುದಿಲ್ಲವಾದ್ದರಿಂದ ಸದರಿ ವಿದ್ಯಾರ್ಥಿಗಳಿಗೆ ಶುಲ್ಕ ಮಂಜೂರಾತಿ ನೀಡಲು ಸರ್ಕಾರದಿಂದ ವಿಳಂಬ ಮನ್ನಾ ಆದೇಶ ಕೋರುತ್ತಾ, ಸದರಿಯವರು ಸಲ್ಲಿಸಿರುವ ಮನವಿ ಪತ್ರಗಳನ್ನು ಲಗತ್ತಿಸಿ, ಸರ್ಕಾರದ ಆವಗಾಹನೆಗಾಗಿ ಸಲ್ಲಿಸಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಕು: ಶೃತಿ. ಎ., ಇವರಿಗೆ 2008–09 ನೇ ಸಾಲಿನ ಪ್ರಥಮ ವರ್ಷದ ಎಂಬಿಬಿಎಸ್ ಕೋರ್ಸಿನ ಬೋಧನಾ ಶುಲ್ಕವನ್ನು ವಿಳಂಬ ಮನ್ನಾ ಮಾಡಿ ಪ್ರಸಕ್ತ ಸಾಲಿನಲ್ಲಿ ಮರುಪಾವತಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 141 ಆರ್‌ಜಿಯು 2014, ಬೆಂಗಳೂರು, ದಿನಾಂಕ: 11–12–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕು: ಶೃತಿ. ಎ., ಇವರಿಗೆ ಪ್ರಥಮ ವರ್ಷದ ಎಂಬಿಬಿಎಸ್ ಕೋರ್ಸಿನ 2008–09 ನೇ ಸಾಲಿನ ಬೋಧನಾ ಶುಲ್ಕವನ್ನು ಪ್ರಸಕ್ತ ಸಾಲಿನಲ್ಲಿ ಮರುಪಾವತಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು, ವಿಳಂಬ ಮನ್ನಾ ಮಾಡಿ ಆದೇಶಿಸಿದೆ.

1) *ವಿದ್ಯಾರ್ಥಿನಿಯು ಸರ್ಕಾರಿ ಕೋಟಾದಡಿಯಲ್ಲಿ ಪ್ರವೇಶ ಪಡೆದಿರಬೇಕು.*
2) *ವಿದ್ಯಾರ್ಥಿನಿಯ ಕುಟುಂಬ ವಾರ್ಷಿಕ ವರಮಾನ ರೂ. 2.50 ಲಕ್ಷಕ್ಕಿಂತ ಅಧಿಕವಾಗಿರಬೇಕು.*
3) *ಕಾಲೇಜಿನಿಂದ ಹಾಜರಾತಿ ಹಾಗೂ ನಡತೆ ಪ್ರಮಾಣ ಪತ್ರ ಪಡೆದು ಸಲ್ಲಿಸಬೇಕು.*
4) *ಕಾಲೇಜಿಗೆ ಪ್ರಥಮ ವರ್ಷಕ್ಕೆ ಸರ್ಕಾರ ನಿಗದಿಪಡಿಸಿರುವ ದರದಲ್ಲಿ ಬೋಧನಾ ಶುಲ್ಕ ಪಾವತಿಸಿರುವ ಬಗ್ಗೆ ಖಚಿತಪಡಿಸಿಕೊಳ್ಳುವುದು.*
5) ಸರ್ಕಾರಿ ಆದೇಶ ಸಂಖ್ಯೆ: ಆಕುಕ 407 ಎಂಪಿಎಸ್ 2006, ದಿ: 25–03–2008 ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಆಕುಕ 101 ಆರ್‌ಜಿಯು 2012, ದಿನಾಂಕ: 10–05–2012 ರಂತೆ, ಇವರಿಗೆ ನಿಗದಿಪಡಿಸಿರುವ ಬೋಧನಾ ಶುಲ್ಕದ ಮೊತ್ತವನ್ನು ಮರುಪಾವತಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಆಕುಕ 1202 ಆಂಆಸ 2015, ದಿ: 19–11–2015 ರ ಅಭಿಪ್ರಾಯದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಂಭುಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

**PR. 18**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** 2015–16 ನೇ ಸಾಲಿಗೆ ಖಾಸಗಿ ಹಾಗೂ ಡೀಮ್ಡ್ ವಿಶ್ವವಿದ್ಯಾಲಯಗಳಲ್ಲಿನ ಸರ್ಕಾರಿ ಕೋಟಾದ ಪಿ.ಜಿ. ಸೂಪರ್ ಸ್ಪೆಷಾಲಿಟಿ ಸೀಟುಗಳಿಗೆ ಪ್ರವೇಶ ಪಡೆಯುವ ವಿದ್ಯಾರ್ಥಿಗಳಿಗೆ ಬೋಧನಾ ಶುಲ್ಕವನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಆಕುಕ 101 ಆರ್‌ಜಿಯು 2012, ದಿ: 18–12–2014.
2) ಸರ್ಕಾರದ ಆದೇಶ ಸಂಖ್ಯೆ: ಆಕುಕ 111 ಆರ್‌ಜಿಯು 2015, ದಿ: 01–04–2015.
3) ವೈದ್ಯಕೀಯ ಶಿಕ್ಷಣ ನಿರ್ದೇಶಕರ ದಿ: 14–09–2015 ರ ಪತ್ರ ಸಂಖ್ಯೆ: ಎಂಇಹೆಚ್/01ಎ/2014–15.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರದ ಆದೇಶದನ್ವಯ 2014–15 ನೇ ಸಾಲಿಗೆ ಖಾಸಗಿ/ಡೀಮ್ಡ್ ವಿಶ್ವವಿದ್ಯಾಲಯಗಳಲ್ಲಿನ ಸರ್ಕಾರಿ ಕೋಟಾದ ಪಿಜಿ ಸೂಪರ್ ಸ್ಪೆಷಾಲಿಟಿ ಸೀಟುಗಳಿಗೆ ಪ್ರವೇಶ ಪಡೆಯುವ ಸೇವಾನಿರತ ಪಿಜಿ ವೈದ್ಯರು ಹಾಗೂ ಪರಿಶಿಷ್ಟ ಜಾತಿ/ಪಂಗಡದ ವಿದ್ಯಾರ್ಥಿಗಳಿಗೆ ಖಾಸಗಿ/ಡೀಮ್ಡ್ ವಿಶ್ವವಿದ್ಯಾಲಯಗಳಲ್ಲಿ ನಿಗದಿಪಡಿಸಿಕೊಂಡಿರುವ ಬೋಧನಾ ಶುಲ್ಕದಲ್ಲಿ ಸರ್ಕಾರದಿಂದ ವಾರ್ಷಿಕ ರೂ. 3,35,000/– ಗಳನ್ನು ಮರುಪಾವತಿಸುವುದು ಹಾಗೂ ಉಳಿದ ಶುಲ್ಕವನ್ನು ವಿದ್ಯಾರ್ಥಿಗಳೇ ಭರಿಸಬೇಕೆಂಬ ಷರತ್ತನ್ನು ವಿಧಿಸಿ ಆದೇಶಿಸಲಾಗಿರುತ್ತದೆ. ಮುಂದುವರಿದು, ಮೇಲೆ ಓದಲಾದ (2) ರ ಸರ್ಕಾರದ ಆದೇಶದನ್ವಯ ಈ ಹಿಂದೆ ಸ್ನಾತಕ/ಸ್ನಾತಕೋತ್ತರ ವೈದ್ಯಕೀಯ & ದಂತ ವೈದ್ಯಕೀಯ ಕೋರ್ಸುಗಳಿಗೆ ನಿಗದಿಪಡಿಸಿದ್ದ ಬೋಧನಾ ಶುಲ್ಕದ ದರಗಳನ್ನು 2015–16 ನೇ ಸಾಲಿನಲ್ಲಿ ಪರಿಷ್ಕರಿಸಲಾಗಿದ್ದು, ಅದರಂತೆ ಪರಿಷ್ಕೃತ ದರ ರೂ. 3,69,000/– ಗಳನ್ನು ಮರುಪಾವತಿಸಲು ಹಾಗೂ ಉಳಿದ ಹೆಚ್ಚುವರಿ ಶುಲ್ಕವನ್ನು ವಿದ್ಯಾರ್ಥಿಗಳೇ ಭರಿಸಬೇಕೆಂಬ ಷರತ್ತನ್ನು ವಿಧಿಸಿ ಆದೇಶ ಹೊರಡಿಸಲು ಮೇಲೆ ಓದಲಾದ (3) ರ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ 2015–16 ನೇ ಸಾಲಿಗೆ ಖಾಸಗಿ ಹಾಗೂ ಡೀಮ್ಡ್ ವಿಶ್ವವಿದ್ಯಾಲಯಗಳಲ್ಲಿನ ಸರ್ಕಾರಿ ಕೋಟಾದ ಪಿಜಿ ಸೂಪರ್ ಸ್ಪೆಷಾಲಿಟಿ ಸೀಟುಗಳಿಗೆ ಪ್ರವೇಶ ಪಡೆಯುವ ಸೇವಾನಿರತ ವೈದ್ಯರು ಹಾಗೂ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಖಾಸಗಿ ಹಾಗೂ ಡೀಮ್ಡ್ ವಿಶ್ವವಿದ್ಯಾಲಯಗಳು ನಿಗದಿಪಡಿಸಿಕೊಂಡಿರುವ ಬೋಧನಾ ಶುಲ್ಕದಲ್ಲಿ ಸರ್ಕಾರದಿಂದ ವಾರ್ಷಿಕ ರೂ. 3,69,000/– ಗಳನ್ನು ಮರುಪಾವತಿಸಲು ಹಾಗೂ ಉಳಿದ ಶುಲ್ಕವನ್ನು ವಿದ್ಯಾರ್ಥಿಗಳೇ ಭರಿಸಬೇಕೆಂಬ ಷರತ್ತನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 450 ಆರ್‌ಜಿಯು 2015, ಬೆಂಗಳೂರು ದಿನಾಂಕ 05–12–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2015–16 ನೇ ಸಾಲಿಗೆ ಖಾಸಗಿ ಹಾಗೂ ಡೀಮ್ಡ್ ವಿಶ್ವವಿದ್ಯಾಲಯಗಳಲ್ಲಿನ ಸರ್ಕಾರಿ ಕೋಟಾದ ಪಿಜಿ ಸೂಪರ್ ಸ್ಪೆಷಾಲಿಟಿ ಸೀಟುಗಳಿಗೆ ಪ್ರವೇಶ ಪಡೆಯುವ ಸೇವಾನಿರತ ವೈದ್ಯರು ಹಾಗೂ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ

ವಿದ್ಯಾರ್ಥಿಗಳಿಗೆ ಖಾಸಗಿ ಹಾಗೂ ಡೀಮ್ಡ್ ವಿಶ್ವವಿದ್ಯಾಲಯಗಳು ನಿಗಧಿಪಡಿಸಿಕೊಂಡಿರುವ ಬೋಧನಾ ಶುಲ್ಕದಲ್ಲಿ ಸರ್ಕಾರದಿಂದ ವಾರ್ಷಿಕ ರೂ. 3,69,000/– ಗಳನ್ನು ಮರುಪಾವತಿಸುವುದು ಹಾಗೂ ಉಳಿದ ಶುಲ್ಕವನ್ನು ವಿದ್ಯಾರ್ಥಿಗಳೇ ಭರಿಸಬೇಕೆಂಬ ಷರತ್ತನ್ನು ವಿಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಂಭುಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

**PR. 32**
**SC.25**

## ಕಂದಾಯ ಸಚಿವಾಲಯ

**ವಿಷಯ:–** ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ತ್ಯಾಮಗೊಂಡ್ಲು ಹೋಬಳಿ, ಮಣ್ಣೆ ಗ್ರಾಮದಲ್ಲಿರುವ ಶ್ರೀ ವೀರಭದ್ರಸ್ವಾಮಿ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಕುರಿತು

**ಓದಲಾಗಿದೆ:–** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಎಡಿಎಂ/05/ಸಿಆರ್/40/2011–12 ದಿನಾಂಕ:05.09.2015

**ಪ್ರಸ್ತಾವನೆ:–**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ದಿನಾಂಕ:05.09.2015ರ ಪತ್ರದಲ್ಲಿ, ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 77 ಎಂಇಟಿ 2003 ದಿನಾಂಕ:30.04.2003ರನ್ವಯ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕಿನ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಪುಟ ಸಂಖ್ಯೆ:61 ಕ್ರಮ ಸಂಖ್ಯೆ:142ರಲ್ಲಿ ತ್ಯಾಮಗೊಂಡ್ಲು ಹೋಬಳಿ ಮಣ್ಣೆ ಗ್ರಾಮದಲ್ಲಿರುವ ಶ್ರೀ ವೀರಭದ್ರಸ್ವಾಮಿ ದೇವಾಲಯವು ಪ್ರಕಟವಾಗಿದ್ದು, ವಾರ್ಷಿಕ ₹.2,298–00 ಅಂತಿಮ ತಸ್ತೀಕ್ ನಿಗದಿಯಾಗಿರುತ್ತದೆ. ನೆಲಮಂಗಲ ತಾಲ್ಲೂಕಿಗೆ ಸಂಬಂಧಿಸಿದ ಪ್ರಾಚೀನ ದೇವಾಲಯಗಳ ಗೋಪುರಗಳ ಮಾಹಿತಿಯನ್ನು ನೀಡುವ ಸಂದರ್ಭದಲ್ಲಿ ಪ್ರಸ್ತಾಪಿತ ದೇವಾಲಯವು ಅಸ್ತಿತ್ವದಲ್ಲಿ ಇರುವುದಿಲ್ಲವೆಂದು ತಹಶೀಲ್ದಾರ್, ನೆಲಮಂಗಲ ತಾಲ್ಲೂಕು ಇವರು ವರದಿ ಸಲ್ಲಿಸಿರುತ್ತಾರೆ.

ಸದರಿ ದೇವಾಲಯವು ಅಸ್ತಿತ್ವದಲ್ಲಿ ಇಲ್ಲದೇ ಇರುವುದರಿಂದ ದೇವಾಲಯಕ್ಕೆ ಪ್ರತಿ ವರ್ಷ ಮೇಲು ಸಹಿಯಾಗಿ ಬರುತ್ತಿದ್ದ ಒಟ್ಟು ತಸ್ತೀಕ್ ಮೊತ್ತ `.1,12,498–00ಗಳನ್ನು ಧಾರ್ಮಿಕ ದತ್ತಿ ಆಯುಕ್ತರಿಗೆ ಆದ್ಯರ್ಪಣೆ ಮಾಡುವಂತೆ ತಹಶೀಲ್ದಾರ್ ಇವರಿಗೆ ಸೂಚಿಸಲಾಗಿರುತ್ತದೆ. ಈ ದೇವಾಲಯಕ್ಕೆ ದಿನಾಂಕ:15.10.1988ರಂದು ಜಾರಿ ಮಾಡಿರುವ ಹಕ್ಕು ಪತ್ರ ಸಂಖ್ಯೆ:799/88–89ನ್ನು ಮತ್ತು 2006–07ನೇ ಸಾಲಿನಿಂದ ಜಾರಿಗೆ ಬರುವಂತೆ ತಸ್ತೀಕ್ ಹೆಚ್ಚಿಸಿರುವ ಆದೇಶದ ಅನುಬಂಧದಿಂದ ದೇವಾಲಯದ ಹೆಸರನ್ನು ತೆಗೆದುಹಾಕಲಾಗಿರುತ್ತದೆ.

ದಿನಾಂಕ:16.06.2015ರಂದು ನಡೆದ ರಾಜ್ಯ ಧಾರ್ಮಿಕ ಪರಿಷತ್ತಿನ ಸಭಾ ನಿರ್ಣಯದಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ತ್ಯಾಮಗೊಂಡ್ಲು ಹೋಬಳಿ ಮಣ್ಣೆ ಗ್ರಾಮದಲ್ಲಿ ಶ್ರೀ ವೀರಭದ್ರ ಸ್ವಾಮಿ ದೇವಾಲಯವು ಅಸ್ತಿತ್ವದಲ್ಲಿಲ್ಲದಿರುವುದರಿಂದ ಈ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಕೋರಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 55 ಮುಆಬಿ 2015; ಬೆಂಗಳೂರು, ದಿನಾಂಕ: 01ನೇ ಡಿಸೆಂಬರ್ 2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ತ್ಯಾಮಗೊಂಡ್ಲು ಹೋಬಳಿ ಮಣ್ಣೆ ಗ್ರಾಮದಲ್ಲಿ ಶ್ರೀ ವೀರಭದ್ರಸ್ವಾಮಿ ದೇವಾಲಯವು ಅಸ್ತಿತ್ವದಲ್ಲಿ ಇಲ್ಲದಿರುವುದರಿಂದ ಈ ದೇವಾಲಯವನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕಿನ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಸ್. ನಾಗರತ್ನಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

**PR. 5**
**SC.50**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಮಾನವ ಅಭಿವೃದ್ಧಿ ಸೂಚ್ಯಂಕದ ಆಧಾರದ ಮೇಲೆ ಗುರುತಿಸಲಾದ 88 ಹಿಂದುಳಿದ ತಾಲ್ಲೂಕುಗಳ ತೀವ್ರ ಮೇಲ್ವಿಚಾರಣೆ ಸಂಬಂಧ ಪರಿಶೀಲನಾ ಸಮಿತಿ ರಚಿಸುವ ಕುರಿತು.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರವು ಹೊರತಂದಿರುವ ರಾಜ್ಯ ಮಾನವ ಅಭಿವೃದ್ಧಿ ವರದಿ ಹಾಗೂ ಪ್ರಸ್ತುತ ಬಿಡುಗಡೆಗೊಳಿಸುತ್ತಿರುವ 30 ಜಿಲ್ಲೆಗಳ ಜಿಲ್ಲಾ ಮಾನವ ಅಭಿವೃದ್ಧಿ ವರದಿಗಳ ಪರಿಶೀಲನೆ ಅನುಗುಣವಾಗಿ ಮಾನವ ಅಭಿವೃದ್ಧಿ ಸೂಚ್ಯಂಕದ ಆಧಾರದ ಮೇಲೆ ರಾಜ್ಯದಲ್ಲಿ 88 ತಾಲ್ಲೂಕುಗಳನ್ನು ಹಿಂದುಳಿದ ತಾಲ್ಲೂಕುಗಳೆಂದು ಗುರುತಿಸಲಾಗಿದೆ. ಅವುಗಳಲ್ಲಿ 14 ತಾಲ್ಲೂಕುಗಳು "ಅತೀ ಕೆಳಮಟ್ಟದ" ಹಾಗೂ 74 ತಾಲ್ಲೂಕುಗಳು "ಕೆಳಮಟ್ಟದ" ತಾಲ್ಲೂಕುಗಳಾಗಿರುತ್ತದೆ.

ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ ಇವರು ಆಶಿಸಿರುವಂತೆ, ಸದರಿ 88 ಹಿಂದುಳಿದ ತಾಲ್ಲೂಕುಗಳ (ಮಾನವ ಅಭಿವೃದ್ಧಿ ಸೂಚ್ಯಂಕದ ಪ್ರಕಾರ) ತೀವ್ರ ಮೇಲ್ವಿಚಾರಣೆಯನ್ನು 2015–16 ರಿಂದ 2017–18 ರವರೆಗಿನ ಮೂರು ವರ್ಷಗಳ ಅವಧಿಯಲ್ಲಿ ಜಿಲ್ಲಾ ಮಟ್ಟದ, ಇಲಾಖೆ ಮತ್ತು ರಾಜ್ಯ ಮಟ್ಟದ ಮೇಲ್ವಿಚಾರಣಾ ಸಮಿತಿಗಳನ್ನು ರಚಿಸಿ ಹಂತಹಂತವಾಗಿ ಮೇಲ್ವಿಚಾರಣೆ ಕೈಗೊಳ್ಳುವುದು ಅವಶ್ಯವಿರುತ್ತದೆ.

ಮೊದಲನೇ ವರ್ಷ (2015–16) : ಮೊದಲ ಅತೀ ಹಿಂದುಳಿದ 35 ತಾಲ್ಲೂಕುಗಳು ಸ್ಥಾನ ಕ್ರಮಾಂಕ 141–176 (ಅನುಬಂಧ–3 ಮತ್ತು 5)

ಎರಡನೇ ವರ್ಷ (2016–17) : ನಂತರದ 30 ಹಿಂದುಳಿದ ತಾಲ್ಲೂಕುಗಳು ಸ್ಥಾನ ಕ್ರಮಾಂಕ 111–140 (ಅನುಬಂಧ–3 ಮತ್ತು 5)

ಮೂರನೇ ವರ್ಷ (2017–18) : ಬಾಕಿ ಉಳಿದ 23 ತಾಲ್ಲೂಕುಗಳು ಸ್ಥಾನ ಕ್ರಮಾಂಕ 88–110 (ಅನುಬಂಧ–3 ಮತ್ತು 5)

ಈ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಪಿಡಿ 99(ii) ಪಿಎಸ್‌ಡಿ 2015,ಬೆಂಗಳೂರು, ದಿನಾಂಕ: 21–11–2015**

ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ ಇವರು ಆಶಿಸಿರುವಂತೆ, ಸದರಿ 88 ಹಿಂದುಳಿದ ತಾಲ್ಲೂಕುಗಳ (ಮಾನವ ಅಭಿವೃದ್ಧಿ ಸೂಚ್ಯಂಕದ ಪ್ರಕಾರ) ಪ್ರಗತಿಯನ್ನು ಕಾಲಕಾಲಕ್ಕೆ ಪರಿಶೀಲಿಸಿ ಕಾರ್ಯತಂತ್ರ, ಕ್ರಿಯಾ ಯೋಜನೆಯ ಅನುಷ್ಠಾನ ಮತ್ತು ಸಾಧಿಸಿದ ಪ್ರಗತಿಗಳ ಪರಿಣಾಮಕಾರಿ ಮೇಲ್ವಿಚಾರಣೆಯನ್ನು 2015–16 ರಿಂದ 2017–18 ರವರೆಗಿನ ಮೂರು ವರ್ಷಗಳ ಅವಧಿಯಲ್ಲಿ ಹಂತಹಂತವಾಗಿ ಅಂದರೆ,

ಮೊದಲನೇ ವರ್ಷ (2015–16) : ಮೊದಲ ಅತೀ ಹಿಂದುಳಿದ 35 ತಾಲ್ಲೂಕುಗಳು ಸ್ಥಾನ ಕ್ರಮಾಂಕ 141–176 (ಅನುಬಂಧ–3 ಮತ್ತು 5)

ಎರಡನೇ ವರ್ಷ (2016–17) : ನಂತರದ 30 ಹಿಂದುಳಿದ ತಾಲ್ಲೂಕುಗಳು ಸ್ಥಾನ ಕ್ರಮಾಂಕ 111–140 (ಅನುಬಂಧ–3 ಮತ್ತು 5)

ಮೂರನೇ ವರ್ಷ (2017–18) : ಬಾಕಿ ಉಳಿದ 23 ತಾಲ್ಲೂಕುಗಳು ಸ್ಥಾನ ಕ್ರಮಾಂಕ 88–110 (ಅನುಬಂಧ–3 ಮತ್ತು 5)

ಕೈಗೊಳ್ಳುವ ಬಗ್ಗೆ ರಾಜ್ಯ, ಇಲಾಖೆ ಹಾಗೂ ಜಿಲ್ಲಾ ಮಟ್ಟದಲ್ಲಿ ರಚಿಸಲಾದ ಸಮಿತಿಗಳು ಹಾಗೂ ಅವುಗಳ ಕರ್ತವ್ಯಗಳು ಈ ಕೆಳಗಿನಂತಿವೆ:

**ಅನುಬಂಧ–1**

**ರಾಜ್ಯ ಮಟ್ಟದ ಪರಿಶೀಲನೆ ಹಾಗೂ ಮೇಲ್ವಿಚಾರಣಾ ಸಮಿತಿ**

| | | |
|---|---|---|
| 1 | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಅಭಿವೃದ್ಧಿ ಆಯುಕ್ತರು | ಅಧ್ಯಕ್ಷರು |
| 2 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಕೃಷಿ ಇಲಾಖೆ | ಸದಸ್ಯರು |
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಪ್ರಾಥಮಿಕ ಶಿಕ್ಷಣ ಇಲಾಖೆ | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 5 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 6 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | ಸದಸ್ಯರು |
| 7 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ವಸತಿ ಇಲಾಖೆ | ಸದಸ್ಯರು |

| | | |
|---|---|---|
| 8 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ | ಸದಸ್ಯರು |
| 9 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ | ಸದಸ್ಯರು |
| 10 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | ಸದಸ್ಯರು |
| 11 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ | ಸದಸ್ಯರು |
| 12 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯರು |
| 13 | ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳು | ಸದಸ್ಯರು |
| 14 | ಸರ್ಕಾರದ ಕಾರ್ಯದರ್ಶಿಗಳು, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ | ಸದಸ್ಯ ಕಾರ್ಯದರ್ಶಿ |

**ರಾಜ್ಯ ಮಟ್ಟದ ಪರಿಶೀಲನೆ ಹಾಗೂ ಮೇಲ್ವಿಚಾರಣಾ ಸಮಿತಿಯ ಕರ್ತವ್ಯಗಳು:**

1. ಸಮಿತಿಯು ನಾಲ್ಕು ತಿಂಗಳಿಗೊಮ್ಮೆ ಸಭೆ ಸೇರಿ ಮಾನವ ಅಭಿವೃದ್ಧಿ ಸೂಚ್ಯಂಕದ ಆಧಾರದ ಮೇಲೆ ಗುರುತಿಸಲಾದ 88 ಅತೀ ಹಿಂದುಳಿದ ತಾಲ್ಲೂಕುಗಳಿಗೆ ಸಂಬಂಧಿಸಿದ ಮಾನವ ಅಭಿವೃದ್ಧಿ ಸೂಚ್ಯಂಕಗಳ ಎಲ್ಲಾ 11 ಸೂಚಕಗಳನ್ನು ಹಾಗೂ ಸಂಬಂಧಿಸಿದ ಸೂಚಕಗಳನ್ನು ಪರಿಶೀಲಿಸುವುದು ಹಾಗೂ ಮೇಲ್ವಿಚಾರಣೆ ಕೈಗೊಳ್ಳುವುದು.

2. ಮಾನವ ಅಭಿವೃದ್ಧಿ ಸೂಚ್ಯಂಕದ ಎಲ್ಲಾ 11 ಸೂಚಕಗಳಲ್ಲಿ 88 ಹಿಂದುಳಿದ ತಾಲ್ಲೂಕುಗಳ ಸಾಧನ ಮಟ್ಟವು ರಾಜ್ಯ ಮಟ್ಟದ ಸಾಧನೆಗಿಂತ ತುಂಬಾ ಕೆಳಮಟ್ಟದಲ್ಲಿದ್ದು, ಸಮಿತಿಯು ಈ 88 ಹಿಂದುಳಿದ ತಾಲ್ಲೂಕುಗಳು ಮೂರು ವರ್ಷದ ಅವಧಿಯಲ್ಲಿ ರಾಜ್ಯ ಮಟ್ಟದ ಸಾಧನೆ ತಲುಪುವ ನಿಟ್ಟಿನಲ್ಲಿ ಪ್ರಗತಿ ಸಾಧಿಸುವಂತೆ ನೋಡಿಕೊಳ್ಳುವುದು. ಆದ್ದರಿಂದ ಸಂಬಂಧಿಸಿದ ಸೂಚ್ಯಂಕದಲ್ಲಿ ರಾಜ್ಯದ ಸಾಧನೆಯ ಅಂಕಿ ಅಂಶಗಳನ್ನು ಮಾನದಂಡವಾಗಿ ಪರಿಗಣಿಸಿ ಈ ಹಿಂದುಳಿದ ತಾಲ್ಲೂಕುಗಳ ಸಾಧನೆ ಸುಧಾರಿಸುವಂತೆ ನೋಡಿಕೊಳ್ಳುವುದು.

3. ಸಮಿತಿ ಅಥವಾ ಸಂಬಂಧಿಸಿದ ಇಲಾಖೆಯು ಮಾನದಂಡದ ಅಂಕಿ ಅಂಶಗಳು ವಾಸ್ತವಾಂಶದಿಂದ ಕೂಡಿರುವುದಿಲ್ಲವೆಂದು ಮನಗಂಡಲ್ಲಿ, ಸಂಬಂಧಿಸಿದ ಇಲಾಖೆಯು ರಾಜ್ಯ, ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದಲ್ಲಿ ವಾಸ್ತವಿಕ ಅಂಕಿಅಂಶಗಳನ್ನು ಪಡೆಯುವ ನಿಟ್ಟಿನಲ್ಲಿ ಒಂದು ವಿಧಾನವನ್ನು ರೂಪಿಸತಕ್ಕದ್ದು ಹಾಗೂ ಸದರಿ ಅಂಕಿಅಂಶವು ರಾಜ್ಯ ಮಟ್ಟದ ಮಾನದಂಡವಾಗಿರುವುದು.

4. ಇಲಾಖೆ ಹಾಗೂ ಜಿಲ್ಲಾ ಮಟ್ಟದ ಪರಿಶೀಲನೆ ಹಾಗೂ ಮೇಲ್ವಿಚಾರಣಾ ಸಮಿತಿಗಳಿಗೆ ಮಾರ್ಗದರ್ಶನ ನೀಡುವುದು.

5. ಸಾಂಸ್ಥಿಕ ಅಂತರವನ್ನು ಕಡಿಮೆ ಮಾಡಲು ಕಾರ್ಯನೀತಿ ಹಾಗೂ ಯೋಜನೆಗಳನ್ನು ರೂಪಿಸುವುದು ಹಾಗೂ ರಾಜ್ಯ ಸರ್ಕಾರಕ್ಕೆ ಸೂಕ್ತ ಸಲಹೆ, ಮಾರ್ಗದರ್ಶನ ನೀಡುವುದು.

6. ಸಮಸ್ಯೆ ಕ್ಷೇತ್ರವನ್ನು ಗುರುತಿಸಿ, ಜಿಲ್ಲಾ ಮಟ್ಟದ ಸಮಿತಿಯು ಸದರಿ ಸಮಸ್ಯೆಯನ್ನು ಬಗೆಹರಿಸುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಲು ಅನುಕೂಲವಾಗುವಂತೆ ವಿಷಯವನ್ನು ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳ ಗಮನಕ್ಕೆ ತರುವುದು.

7. ಉಪ ಕಾರ್ಯದರ್ಶಿಗಳು, ವಿಶೇಷ ಅಭಿವೃದ್ಧಿ ಕೋಶ, ಯೋಜನಾ ಇಲಾಖೆ ಇವರು ರಾಜ್ಯ ಮಟ್ಟದ ಸಮಿತಿಗೆ ಮತ್ತು ಸರ್ಕಾರದ ಕಾರ್ಯದರ್ಶಿಗಳು, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರಿಗೆ ಸಭಾ ಟಿಪ್ಪಣಿ ಹಾಗೂ ಅಜೆಂಡಾ ತಯಾರಿಕೆ ಬಗ್ಗೆ ಸಹಾಯ ನೀಡತಕ್ಕದ್ದು.

8. ಐದು ವರ್ಷಗಳ ಅವಧಿಯಲ್ಲಿನ ಸುಧಾರಣೆಯನ್ನು ಅಂದಾಜಿಸಲು ಅನುಕೂಲವಾಗುವಂತೆ ಪ್ರತಿ ಐದು ವರ್ಷಕ್ಕೊಮ್ಮೆ ಜಿಲ್ಲಾ ಮಾನವ ಅಭಿವೃದ್ಧಿ ವರದಿಯನ್ನು ತಯಾರಿಸುವ ಅವಶ್ಯಕತೆ ಬಗ್ಗೆ ಸಮಿತಿಯು ಪರಿಶೀಲಿಸತಕ್ಕದ್ದು.

**ಅನುಬಂಧ–2**

**ಯೋಜನಾ ಇಲಾಖೆಯ ನೇತೃತ್ವದಲ್ಲಿ ಪರಿಶೀಲನೆ ಹಾಗೂ ಮೇಲ್ವಿಚಾರಣಾ ಸಮಿತಿ**

| | | |
|---|---|---|
| 1 | ಸರ್ಕಾರದ ಕಾರ್ಯದರ್ಶಿಗಳು, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ | ಅಧ್ಯಕ್ಷರು |
| 2 | ನಿರ್ದೇಶಕರು, ಕೃಷಿ ಇಲಾಖೆ | ಸದಸ್ಯರು |
| 3 | ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ | ಸದಸ್ಯರು |
| 4 | ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ | ಸದಸ್ಯರು |
| 5 | ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 6 | ಮುಖ್ಯ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ | ಸದಸ್ಯರು |

| | | |
|---|---|---|
| 7 | ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ | ಸದಸ್ಯರು |
| 8 | ನಿರ್ದೇಶಕರು, ಹಿಂದುಳಿದ ವರ್ಗಗಳ ಇಲಾಖೆ | ಸದಸ್ಯರು |
| 9 | ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ. | |
| 10 | ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ | ಸದಸ್ಯರು |
| 11 | ನಿರ್ದೇಶಕರು, ನೈರ್ಮಲೀಕರಣ ಪ್ರಚಾರ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ಇಲಾಖೆ. | ಸದಸ್ಯರು |
| 12 | ವ್ಯವಸ್ಥಾಪಕ ನಿರ್ದೇಶಕರು, ರಾಜೀವ್ ಗಾಂಧಿ ವಸತಿ ಮಂಡಳಿ | ಸದಸ್ಯರು |
| 13 | ನೋಡಲ್ ನಿರ್ದೇಶಕರುಗಳು, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ | ಸದಸ್ಯರು |
| 14 | ಸರ್ಕಾರದ ಉಪ ಕಾರ್ಯದರ್ಶಿಗಳು, ವಿಶೇಷ ಅಭಿವೃದ್ಧಿ ಯೋಜನೆ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ | ಸದಸ್ಯ ಕಾರ್ಯದರ್ಶಿ |

**ಸಮಿತಿಯ ಕರ್ತವ್ಯಗಳು:**

1. ಸಮಿತಿಯು ಅಂಕಿಅಂಶಗಳ ಸಂಗ್ರಹಣೆ, ಪರಿಶೋಧನೆ ಹಾಗೂ ವಿಶ್ಲೇಷಣೆ ಹಾಗೂ ಸಭೆಗಳನ್ನು ಸಂಘಟಿಸಲು ರಾಜ್ಯ ಮಟ್ಟದ ಸಮಿತಿಗೆ ಸಹಾಯ ನೀಡತಕ್ಕದ್ದು.

2. ಸಂಬಂಧಿಸಿದ ಸದಸ್ಯರು ತಿಂಗಳಿಗೊಮ್ಮೆ ಸರಿಯಾದ ಅಂಕಿಅಂಶಗಳನ್ನು ಜಿಲ್ಲೆಯಿಂದ ಇಲಾಖೆಗೆ ಹಾಗೂ ಇಲಾಖೆಯಿಂದ ಯೋಜನಾ ಇಲಾಖೆಗೆ ನೀಡುವ ನಿಟ್ಟಿನಲ್ಲಿ ಕ್ರಮವಹಿಸತಕ್ಕದ್ದು.

3. ಸದಸ್ಯರು ಸಂಬಂಧಿಸಿದ ಇಲಾಖೆಯ ಮುಖ್ಯಸ್ಥರಾಗಿರುವುದರಿಂದ, ಜಿಲ್ಲಾ ಮಟ್ಟದ ತಮ್ಮ ಇಲಾಖೆಯ ಅಧಿಕಾರಿಗಳಿಗೆ ಸಾಂಸ್ಥಿಕ ಅಂತರವನ್ನು ಗುರುತಿಸಿ ವಾಸ್ತವಾಂಶವನ್ನೊಳಗೊಂಡ ಜಿಲ್ಲಾ ಮಟ್ಟದ ಕ್ರಿಯಾ ಯೋಜನೆಯನ್ನು ತಯಾರಿಸುವ ನಿಟ್ಟಿನಲ್ಲಿ ಮಾರ್ಗದರ್ಶನ ನೀಡತಕ್ಕದ್ದು.

4. ಸಮಿತಿಯು ಗಮನಿಸಿದ ಅಂಶಗಳನ್ನು ರಾಜ್ಯ ಮಟ್ಟದ ಹಾಗೂ ಜಿಲ್ಲಾ ಮಟ್ಟದ ಸಮಿತಿಗಳಿಗೆ ತಲುಪಿಸತಕ್ಕದ್ದು.

5. ಸಮಿತಿಯು ಮೂರು ತಿಂಗಳಿಗೊಮ್ಮೆ ಸಭೆ ಸೇರಿ ಮಾನವ ಅಭಿವೃದ್ಧಿ ಸೂಚ್ಯಂಕದ ಆಧಾರದ ಮೇಲೆ ಗುರುತಿಸಲಾದ 88 ಅತೀ ಹಿಂದುಳಿದ ತಾಲ್ಲೂಕುಗಳಿಗೆ ಸಂಬಂಧಿಸಿದ ಮಾನವ ಅಭಿವೃದ್ಧಿ ಸೂಚ್ಯಂಕಗಳ ಎಲ್ಲಾ 11 ಸೂಚಕಗಳನ್ನು ಹಾಗೂ ಸಂಬಂಧಿಸಿದ ಸೂಚಕಗಳನ್ನು ಪರಿಶೀಲಿಸುವುದು ಹಾಗೂ ಮೇಲ್ವಿಚಾರಣೆ ಕೈಗೊಳ್ಳುವುದು.

6. ಮಾನವ ಅಭಿವೃದ್ಧಿ ಸೂಚ್ಯಂಕದ ಎಲ್ಲಾ 11 ಸೂಚಕಗಳಲ್ಲಿ 88 ಹಿಂದುಳಿದ ತಾಲ್ಲೂಕುಗಳ ಸಾಧನ ಮಟ್ಟವು ರಾಜ್ಯ ಮಟ್ಟದ ಸಾಧನೆಗಿಂತ ತುಂಬಾ ಕೆಳಮಟ್ಟದಲ್ಲಿದ್ದು, ಸಮಿತಿಯು ಈ 88 ಹಿಂದುಳಿದ ತಾಲ್ಲೂಕುಗಳು ಮೂರು ವರ್ಷದ ಅವಧಿಯಲ್ಲಿ ರಾಜ್ಯ ಮಟ್ಟದ ಸಾಧನೆ ತಲುಪುವ ನಿಟ್ಟಿನಲ್ಲಿ ಪ್ರಗತಿ ಸಾಧಿಸುವಂತೆ ನೋಡಿಕೊಳ್ಳುವುದು. ಆದ್ದರಿಂದ ಸಂಬಂಧಿಸಿದ ಸೂಚ್ಯಂಕದಲ್ಲಿ ರಾಜ್ಯದ ಸಾಧನೆಯ ಅಂಕಿ ಅಂಶಗಳನ್ನು ಮಾನದಂಡವಾಗಿ ಪರಿಗಣಿಸಿ ಈ ಹಿಂದುಳಿದ ತಾಲ್ಲೂಕುಗಳ ಸಾಧನೆ ಸುಧಾರಿಸುವಂತೆ ನೋಡಿಕೊಳ್ಳುವುದು.

7. ಸಮಿತಿ ಅಥವಾ ಸಂಬಂಧಿಸಿದ ಇಲಾಖೆಯು ಮಾನದಂಡದ ಅಂಕಿ ಅಂಶಗಳು ವಾಸ್ತವಾಂಶದಿಂದ ಕೂಡಿರುವುದಿಲ್ಲವೆಂದು ಮನಗಂಡಲ್ಲಿ, ಸಂಬಂಧಿಸಿದ ಇಲಾಖೆಯು ರಾಜ್ಯ, ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದಲ್ಲಿ ವಾಸ್ತವಿಕ ಅಂಕಿಅಂಶಗಳನ್ನು ಪಡೆಯುವ ನಿಟ್ಟಿನಲ್ಲಿ ಒಂದು ವಿಧಾನವನ್ನು ರೂಪಿಸತಕ್ಕದ್ದು ಹಾಗೂ ಸದರಿ ಅಂಕಿಅಂಶವು ರಾಜ್ಯ ಮಟ್ಟದ ಮಾನದಂಡವಾಗಿರುವುದು.

**ಅನುಬಂಧ–3**

**ಜಿಲ್ಲಾ ಮಟ್ಟದ ಪರಿಶೀಲನೆ ಹಾಗೂ ಮೇಲ್ವಿಚಾರಣಾ ಸಮಿತಿ**

| | | |
|---|---|---|
| 1 | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2 | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ | ಸಹ ಅಧ್ಯಕ್ಷರು |
| 3 | ಉಪ ಕಾರ್ಯದರ್ಶಿಗಳು, ಜಿಲ್ಲಾ ಪಂಚಾಯತ್ | ನೋಡಲ್ ಅಧಿಕಾರಿ |
| 4 | ಜಂಟಿ ನಿರ್ದೇಶಕರು, ಕೃಷಿ ಇಲಾಖೆ, ಜಿಲ್ಲಾ ಪಂಚಾಯತ್ | ಸದಸ್ಯರು |
| 5 | ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಜಿಲ್ಲಾ ಪಂಚಾಯತ್ | ಸದಸ್ಯರು |
| 6 | ಕಾರ್ಯಕಾರಿ ಅಭಿಯಂತರರು, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ. | ಸದಸ್ಯರು |
| 7 | ಜಿಲ್ಲಾ ಆರೋಗ್ಯ ಅಧಿಕಾರಿ, ಜಿಲ್ಲಾ ಪಂಚಾಯತ್ | ಸದಸ್ಯರು |

| | | |
|---|---|---|
| 8 | ಉಪ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಜಿಲ್ಲಾ ಪಂಚಾಯತ್ | ಸದಸ್ಯರು |
| 9 | ಉಪ ನಿರ್ದೇಶಕರು, ಹಿಂದುಳಿದ ವರ್ಗಗಳ ಇಲಾಖೆ, ಜಿಲ್ಲಾ ಪಂಚಾಯತ್ | ಸದಸ್ಯರು |
| 10 | ಉಪ ನಿರ್ದೇಶಕರು, ಅಲ್ಪಸಂಖ್ಯಾತ ಇಲಾಖೆ, ಜಿಲ್ಲಾ ಪಂಚಾಯತ್ | ಸದಸ್ಯರು |
| 11 | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ. | ಸದಸ್ಯರು |
| 12 | ಕಾರ್ಯಕಾರಿ ಅಭಿಯಂತರರು, ESCOM | ಸದಸ್ಯರು |
| 13 | ಸಂಬಂಧಿಸಿದ ಹಿಂದುಳಿದ ತಾಲ್ಲೂಕುಗಳ ತಾಲ್ಲೂಕು ಮಟ್ಟದ ಅಧಿಕಾರಿಗಳು (ಜಿಲ್ಲಾ ಸಮಿತಿಯು ನೇಮಕ ಮಾಡತಕ್ಕದ್ದು) | ಸದಸ್ಯರು |
| 14 | ಮುಖ್ಯ ಯೋಜನಾಧಿಕಾರಿ, ಜಿಲ್ಲಾ ಪಂಚಾಯತ್ | ಸದಸ್ಯ ಕಾರ್ಯದರ್ಶಿ |

**ಸಮಿತಿಯ ಕರ್ತವ್ಯಗಳು:**

1. ಸಂಬಂಧಿಸಿದ ಇಲಾಖೆಗಳ ಜಿಲ್ಲಾ ಮಟ್ಟದ ಅಧಿಕಾರಿಗಳು ಅವಶ್ಯಕ ಅಂಕಿಅಂಶ/ ಮಾಹಿತಿಯನ್ನು ಸಮಿತಿಗೆ ನೀಡತಕ್ಕದ್ದು.

2. ಹೆಚ್ಚುವರಿ ಮಾಹಿತಿ ಅಂಕಿಅಂಶಗಳು ಬೇಕಾದಲ್ಲಿ ಸಮಿತಿಯು ಯಾವುದೇ ಅಧಿಕಾರಿಗಳನ್ನು ಅಥವಾ ಪರಿಣಿತರನ್ನು ಆಹ್ವಾನಿಸಬಹುದು.

3. ಅವಶ್ಯವಾಗಿ ಪರಿಹರಿಸಬೇಕಾದ ಸಾಂಸ್ಥಿಕ ಮತ್ತು ಇತರ ಅಂತರಗಳನ್ನು / ಸಮಸ್ಯೆಗಳನ್ನು ಪ್ರಮುಖವಾಗಿರಿಸಿಕೊಂಡು ಜಿಲ್ಲೆಯ ಹಿಂದುಳಿದ ತಾಲ್ಲೂಕುಗಳ ಕ್ರಿಯಾ ಯೋಜನೆಯನ್ನು ತಯಾರಿಸತಕ್ಕದ್ದು.

4. ಕ್ರಿಯಾ ಯೋಜನೆಯನ್ನು ತಯಾರಿಸಲು ಸಮಿತಿಗೆ ಸಹಾಯ ನೀಡಲು ಜಿಲ್ಲೆಯ ಹಿಂದುಳಿದ ತಾಲ್ಲೂಕಿನಲ್ಲಿ ಒಬ್ಬ ಅಧಿಕಾರಿಯನ್ನು ಗುರುತಿಸಿ ಅವರನ್ನು ನೋಡಲ್ ಅಧಿಕಾರಿ ಎಂದು ನೇಮಕ ಮಾಡಿಕೊಳ್ಳಬಹುದು.

5. 11 ಸೂಚಕಗಳ ಪೈಕಿ ಪ್ರತಿಯೊಂದು ಸೂಚಕದ ಸಾಂಸ್ಥಿಕ ಅಂತರವನ್ನು ಸ್ಪಷ್ಟವಾಗಿ ಗುರುತಿಸಿ ಕ್ರಿಯಾ ಯೋಜನೆಯಲ್ಲಿ ಸ್ಪಷ್ಟೀಕರಿಸಿ, ಸದರಿ ವಿಷಯದ ಪರಿಶೀಲನೆ ಮತ್ತು ಮೇಲ್ವಿಚಾರಣೆಗೆ ಹೆಚ್ಚಿನ ಒತ್ತು ನೀಡತಕ್ಕದ್ದು.

6. ಸಮಿತಿಯು ತಿಂಗಳಿಗೊಮ್ಮೆ ಸಭೆ ಸೇರಿ ಮಾನವ ಅಭಿವೃದ್ಧಿ ಸೂಚ್ಯಂಕದ ಆಧಾರದ ಮೇಲೆ ಗುರುತಿಸಲಾದ 88 ಅತೀ ಹಿಂದುಳಿದ ತಾಲ್ಲೂಕುಗಳಿಗೆ ಸಂಬಂಧಿಸಿದ ಮಾನವ ಅಭಿವೃದ್ಧಿ ಸೂಚ್ಯಂಕಗಳ ಎಲ್ಲಾ 11 ಸೂಚಕಗಳನ್ನು ಹಾಗೂ ಸಂಬಂಧಿಸಿದ ಸೂಚಕಗಳನ್ನು ಪರಿಶೀಲಿಸುವುದು ಹಾಗೂ ಮೇಲ್ವಿಚಾರಣೆ ಕೈಗೊಳ್ಳುವುದು.

7. ಮಾನವ ಅಭಿವೃದ್ಧಿ ಸೂಚ್ಯಂಕದ ಎಲ್ಲಾ 11 ಸೂಚಕಗಳಲ್ಲಿ 88 ಹಿಂದುಳಿದ ತಾಲ್ಲೂಕುಗಳ ಸಾಧನ ಮಟ್ಟವು ರಾಜ್ಯ ಮಟ್ಟದ ಸಾಧನೆಗಿಂತ ತುಂಬಾ ಕೆಳಮಟ್ಟದಲ್ಲಿದ್ದು, ಸಮಿತಿಯು ಈ 88 ಹಿಂದುಳಿದ ತಾಲ್ಲೂಕುಗಳು ಮೂರು ವರ್ಷದ ಅವಧಿಯಲ್ಲಿ ರಾಜ್ಯ ಮಟ್ಟದ ಸಾಧನೆ ತಲುಪುವ ನಿಟ್ಟಿನಲ್ಲಿ ಪ್ರಗತಿ ಸಾಧಿಸುವಂತೆ ನೋಡಿಕೊಳ್ಳುವುದು. ಆದ್ದರಿಂದ ಸಂಬಂಧಿಸಿದ ಸೂಚ್ಯಂಕದಲ್ಲಿ ರಾಜ್ಯದ ಸಾಧನೆಯ ಅಂಕಿ ಅಂಶಗಳನ್ನು ಮಾನದಂಡವಾಗಿ ಪರಿಗಣಿಸಿ ಈ ಹಿಂದುಳಿದ ತಾಲ್ಲೂಕುಗಳ ಸಾಧನೆ ಸುಧಾರಿಸುವಂತೆ ನೋಡಿಕೊಳ್ಳುವುದು.

8. ಸಮಿತಿ ಅಥವಾ ಸಂಬಂಧಿಸಿದ ಇಲಾಖೆಯು ಮಾನದಂಡದ ಅಂಕಿ ಅಂಶಗಳು ವಾಸ್ತವಾಂಶದಿಂದ ಕೂಡಿರುವುದಿಲ್ಲವೆಂದು ಮನಗಂಡಲ್ಲಿ, ಸಂಬಂಧಿಸಿದ ಇಲಾಖೆಯು ರಾಜ್ಯ, ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದಲ್ಲಿ ವಾಸ್ತವಿಕ ಅಂಕಿಅಂಶಗಳನ್ನು ಪಡೆಯುವ ನಿಟ್ಟಿನಲ್ಲಿ ಒಂದು ವಿಧಾನವನ್ನು ರೂಪಿಸತಕ್ಕದ್ದು ಹಾಗೂ ಸದರಿ ಅಂಕಿಅಂಶವು ರಾಜ್ಯ ಮಟ್ಟದ ಮಾನದಂಡವಾಗಿರುವುದು.

9. ವಾರ್ಷಿಕ ಆಯವ್ಯಯದಲ್ಲಿ ಇಲಾಖೆಗೆ ನೀಡಲಾದ ಭೌತಿಕ ಮತ್ತು ಆರ್ಥಿಕ ಅನುದಾನವನ್ನು ಹಿಂದುಳಿದ ಜಿಲ್ಲೆಗಳ ಸಾಂಸ್ಥಿಕ ಅಂತರವನ್ನು ಕಡಿಮೆಗೊಳಿಸಿ ಪ್ರಸ್ತುತ ಹಿಂದುಳಿಯುವಿಕೆ ಸ್ಥಿತಿಯಿಂದ ಮೇಲೆತ್ತಲು ಉಪಯೋಗಿಸುವುದು.

10. ಸಮಿತಿಯು 11 ಸೂಚಕಗಳಲ್ಲಿ ರಾಜ್ಯದ ಸಾಧನೆಯನ್ನು ಪರಿಗಣಿಸಿ ಕ್ರಿಯಾ ಯೋಜನೆಯನ್ನು ತಯಾರಿಸತಕ್ಕದ್ದು. ರಾಜ್ಯದ ಸಾಧನೆಯನ್ನು ಮಾನದಂಡವಾಗಿ ಪರಿಗಣಿಸತಕ್ಕದ್ದು. ರಾಜ್ಯ ಮಟ್ಟದ ಸಾಧನೆಯನ್ನು ತಲುಪಲು ಅನುಕೂಲವಾಗುವಂತೆ ಪ್ರಸ್ತುತ ಸಾಂಸ್ಥಿಕ ಮತ್ತು ಇತರ ಅಂತರಗಳನ್ನು ಗುರುತಿಸಿ ಕ್ರಿಯಾ ಯೋಜನೆಯನ್ನು ತಯಾರಿಸತಕ್ಕದ್ದು.

11. ಮಾನವ ಅಭಿವೃದ್ಧಿ ಸೂಚಕ ಮೌಲ್ಯಗಳ ಆಧಾರದ ಮೇಲೆ ಮಾನದಂಡ ಪಡೆಯಲಾಗಿದ್ದು, ಅದು 11 ಸೂಚಕಗಳಲ್ಲಿ ತಾಲ್ಲೂಕಿನ ಸಾಧನೆಯನ್ನು ಅವಲಂಬಿಸಿದೆ. ಮುಖ್ಯವಾಗಿ ಮಾನವ ಅಭಿವೃದ್ಧಿ ಸೂಚಕಗಳನ್ನು ಗಮನದಲ್ಲಿರಿಸಿಕೊಂಡು ಕ್ರಿಯಾ ಯೋಜನೆಯನ್ನು ತಯಾರಿಸತಕ್ಕದ್ದು. ಮಾನವ ಅಭಿವೃದ್ಧಿ ಸೂಚಕಗಳಿಗೆ ಸಂಬಂಧಿಸಿದ ಇತರ ಸೂಚಕಗಳಿದ್ದಲ್ಲಿ, ಅವುಗಳನ್ನು ಕೂಡ ಪರಿಶೀಲಿಸಿ ಮೇಲ್ವಿಚಾರಣೆ ಕೈಗೊಳ್ಳತಕ್ಕದ್ದು.

12. ಮಾನವ ಅಭಿವೃದ್ಧಿ ಸೂಚಕಗಳಿಗೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಪರಿಣಾಮ ಬೀರುವ ಅಂಶಗಳನ್ನು ಗುರುತಿಸಿ ಅವುಗಳನ್ನು ಪರಿಹರಿಸುವ ಬಗ್ಗೆ ಕ್ರಮ ವಹಿಸುವುದು.

13. 11 ಸೂಚಕಗಳಲ್ಲಿ ತಾಲ್ಲೂಕಿನ ಸಾಧನೆಗೆ ಸಹಕರಿಸುವ ಇತರ ಅಂಶಗಳನ್ನು ಕ್ರಿಯಾ ಯೋಜನೆಯಲ್ಲಿ ಅಳವಡಿಸಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರಫೀ ಅಹಮದ್ ಎಂ.ಎಸ್**

ಸರ್ಕಾರದ ಅಧೀನ ಕಾರ್ಯದರ್ಶಿ–1&2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

PR. 17

## ಆರ್ಥಿಕ ಸಚಿವಾಲಯ

**ವಿಷಯ:** 2016ನೇ ಸಾಲಿನ ಅವಧಿಗೆ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗದೀಕರಣ ಪಡೆಯುವ ಸೌಲಭ್ಯವನ್ನು ನಿಯತಗೊಳಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಆಇ 5 ಸೇನಿಸೇ 2012 ದಿನಾಂಕ: 14.06.2012.

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 118(2)ರ ಸೌಲಭ್ಯ ಪಡೆಯುವ ಸಲುವಾಗಿ, ಪ್ರತೀ ಕ್ಯಾಲೆಂಡರ್ ವರ್ಷದಲ್ಲಿ (ಆಯಾ ವರ್ಷದ ಜನವರಿ 1ರಿಂದ ಡಿಸೆಂಬರ್ 31ರ ಒಳಗೆ) 15 ದಿನಗಳಿಗೆ ಮೀರದ ಗಳಿಕೆ ರಜೆಯನ್ನು ಅಧ್ಯರ್ಪಿಸಿ, ರಜಾ ವೇತನಕ್ಕೆ ಸಮನಾದ ನಗದೀಕರಣ ಪಡೆಯಬಹುದಾದ ಸೌಲಭ್ಯವನ್ನು ದಿನಾಂಕ: 01.01.2013ರಿಂದ ಜಾರಿಗೊಳಿಸಲಾಗಿದೆ.

2016ನೇ ಸಾಲಿನ ಅವಧಿಗೆ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗದೀಕರಣ ಪಡೆಯುವ ಸೌಲಭ್ಯವನ್ನು ನಿಯತಗೊಳಿಸುವುದು ಅವಶ್ಯಕವೆಂದು ಸರ್ಕಾರವು ಈ ಬಗ್ಗೆ ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 8 ಸೇನಿಸೇ 2015 ಬೆಂಗಳೂರು, ದಿನಾಂಕ 10.12.2015**

2016ನೇ ಸಾಲಿನ ಅವಧಿಗೆ ಗರಿಷ್ಟ 15 ದಿನಗಳಿಗೆ ಮೀರದ ಗಳಿಕೆ ರಜೆಯನ್ನು ಅಧ್ಯರ್ಪಿಸಿ ರಜಾ ವೇತನಕ್ಕೆ ಸಮನಾದ ನಗದೀಕರಣ ಸೌಲಭ್ಯ ಪಡೆಯುವ ಯೋಜನೆಯನ್ನು ದಿನಾಂಕ 01.01.2016 ರಿಂದ ಜಾರಿಗೊಳಿಸಿ ಈ ಕೆಳಕಂಡಂತೆ ನಿಯತಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿ / ನೌಕರರ ಸಮೂಹ | ಮುಂಚಿತವಾಗಿ ಒಂದು ತಿಂಗಳ ನೋಟಿಸ್ ನೀಡಿ 2016 ನೇ ಸಾಲಿನ ಅವಧಿಗೆ ನಗದೀಕರಣ ಸೌಲಭ್ಯ ಪಡೆಯುವ ಅವಧಿ |
|---|---|---|
| 1. | ಗ್ರೂಪ್ 'ಡಿ' ಸಮೂಹ | ಅವರ ಇಚ್ಚೆಯಂತೆ 2016ರ ಕ್ಯಾಲೆಂಡರ್ ವರ್ಷದ ಯಾವುದೇ ತಿಂಗಳಿನಲ್ಲಿ . |
| 2. | ಉಳಿದ ಸಮೂಹ (ಎ, ಬಿ, ಸಿ,) | ಅವರ ಇಚ್ಚೆಯಂತೆ ಏಪ್ರಿಲ್ 2016ರಿಂದ ಡಿಸೆಂಬರ್ 2016ರ ವರೆಗಿನ ಯಾವುದೇ ತಿಂಗಳಿನಲ್ಲಿ. |

2. ಮೇಲೆ ವಿಧಿಸಿದ ನಿಬಂಧನೆಯು ಏನೇ ಇದ್ದಾಗ್ಯೂ ಜನವರಿ 2016 ರಿಂದ ಮಾರ್ಚ್ 2016 ರಲ್ಲಿ ನಿವೃತ್ತಿ ಹೊಂದುವ ಎಲ್ಲಾ ಅರ್ಹ ನೌಕರರು/ ಅಧಿಕಾರಿಗಳು, ಅವರು ನಿವೃತ್ತಿ ಹೊಂದುವ ತಿಂಗಳಲ್ಲಿ ನಗದೀಕರಣ ಪ್ರಯೋಜನ ಪಡೆಯಲು ಅರ್ಹರಾಗಿರುತ್ತಾರೆ.

3. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 118 ರಲ್ಲಿ ನಿಯಮಿಸಿರುವಂತಹ ಗಳಿಕೆ ರಜೆ ನಗದೀಕರಣ ನಿಯಂತ್ರಣಕ್ಕೆ ಸಂಬಂಧಿಸಿದ ಇತರೆ ಷರತ್ತುಗಳು ಅನ್ವಯವಾಗುತ್ತದೆ.

4. ಈ ಆದೇಶವು ಈಗಾಗಲೇ ಈ ಸೌಲಭ್ಯ ವಿಸ್ತರಣೆಯಾಗಿರುವ ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಸಂಸ್ಥೆಗಳ ನೌಕರರಿಗೂ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಬಿ.ಹೇಮಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು–1)

PR. 27

## ಆರ್ಥಿಕ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಎಫ್‌ಡಿ 2 ಸೇನಿಸೇ 2015, ಬೆಂಗಳೂರು, ದಿನಾಂಕ:04–12–2015**

**ವಿಷಯ:** ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ:118(ಎ) ರೀತ್ಯ ನಿವೃತ್ತಿ ಸಮಯದಲ್ಲಿ ಗಳಿಕೆ ರಜೆ ನಗದೀಕರಣದ ಬಗ್ಗೆ.

**ಉಲ್ಲೇಖ:** (1) ಸುತ್ತೋಲೆ ಸಂಖ್ಯೆ: ಎಫ್‌ಡಿ 1 ಎಸ್‌ಆರ್‌ಎಸ್ 2001, ದಿನಾಂಕ:08.08.2001.

(2) ಸರ್ಕಾರಿ ಆದೇಶ ಸಂಖ್ಯೆ: ಆಇ 8 ಎಸ್‌ಆರ್‌ಎ 2000,ಬೆಂಗಳೂರು, ದಿನಾಂಕ: 12.08.2003.

(3) ಮಹಾಲೇಖಪಾಲರ ಪತ್ರ ಸಂ.: GM/Genl/ಸಿ–37/2014–15/277, ದಿನಾಂಕ:27.03.2015.

ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ:118(ಎ)ಪ್ರಕಾರ ಒಬ್ಬ ಸರ್ಕಾರಿ ನೌಕರನು ನಿವೃತ್ತನಾಗುವ ಸಮಯದಲ್ಲಿ ಗರಿಷ್ಠ 300 ದಿನಗಳ ಮಿತಿಗೊಳಪಟ್ಟು ಅವರ ಖಾತೆಯಲ್ಲಿರುವ ಗಳಿಕೆ ರಜೆಗೆ ಸಮನಾದ ರಜಾ ಸಂಬಳದ ನಗದೀಕರಣ ಸೌಲಭ್ಯವನ್ನು ರಜೆ ಮಂಜೂರು ಮಾಡುವ ಪ್ರಾಧಿಕಾರಿ ಮಂಜೂರು ಮಾಡುವ ಅವಕಾಶವಿದ್ದು, ಸರ್ಕಾರಿ ನೌಕರನು ನಿವೃತ್ತಿಯಾಗುವ ದಿನಾಂಕದಂದು ಅವನ ಖಾತೆಯಲ್ಲಿನ ಗಳಿಕೆ ರಜೆಗೆ ಸಮನಾದ ರಜಾ ಸಂಬಳದ ನಗದೀಕರಣ ಸೌಲಭ್ಯವನ್ನು 300 ದಿನಗಳ ಗರಿಷ್ಠ ಮಿತಿ ಮತ್ತು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ:118(ಎ) ರಲ್ಲಿನ ಇತರೆ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಿ ಸೂಕ್ತ ಆದೇಶವನ್ನು ಸಕ್ಷಮ ಪ್ರಾಧಿಕಾರಿಗಳು ಹೊರಡಿಸಬೇಕಾಗಿದೆ.

ಕ.ನಾ.ಸೇ.ನಿಯಮಾವಳಿಗಳ ನಿಯಮ 118–ಎ(2) ರ ವ್ಯಾಪ್ತಿಗೆ ಒಳಪಡಬಹುದಾದ ಪ್ರಕರಣಗಳಲ್ಲಿ ಈ ಸೌಲಭ್ಯವನ್ನು ಸಕಾಲದಲ್ಲಿ ತಡೆಹಿಡಿಯಬೇಕಾಗುತ್ತದೆ. ಈ ಅಂಶಗಳನ್ನು ಗಮನದಲ್ಲಿರಿಸಿ, ಸಕ್ಷಮ ರಜೆ ಮಂಜೂರಾತಿ ಪ್ರಾಧಿಕಾರವು ಕ.ನಾ.ಸೇ.ನಿಯಮಾವಳಿ, ನಿಯಮ 118ಎ(1)ರ ರೀತ್ಯ ಹೊರಡಿಸುವ ನಗದೀಕರಣ ಸೌಲಭ್ಯ ಮಂಜೂರಾತಿ ಆದೇಶದಲ್ಲಿ ಸದರಿ ಸೌಲಭ್ಯವನ್ನು ಉಪನಿಯಮ(2) ರ ಅವಕಾಶವನ್ನು ಗಮನದಲ್ಲಿರಿಸಿ ಮಂಜೂರಾತಿ ನೀಡಿರುವ ಕುರಿತು ಸ್ಪಷ್ಟವಾಗಿ ಉಲ್ಲೇಖಿಸಿ, ಸಂಬಂಧಿಸಿದ ಆದೇಶವನ್ನು ಹೊರಡಿಸತಕ್ಕದೆಂದು ಉಲ್ಲೇಖ(1) ರಲ್ಲಿನ ಸುತ್ತೋಲೆಯಲ್ಲಿ ಸೂಚಿಸಲಾಗಿತ್ತು.

ತದನಂತರದಲ್ಲಿ, ಕ.ನಾ.ಸೇ.ನಿಯಮಾವಳಿಗಳ ನಿಯಮ 118–ಎ ಅನ್ನು ಉಲ್ಲೇಖ(2)ರ ಆದೇಶದ ಮೇರೆಗೆ ಪರಿಷ್ಕರಿಸಿದ್ದು, ಈ ಮುಂಚಿನ ಉಪನಿಯಮ(2) ರಲ್ಲಿ ಅಡಕವಾಗಿದ್ದ ಅವಕಾಶಗಳನ್ನು ಉಪನಿಯಮ(4) ರಡಿಯಲ್ಲಿ ಅಳವಡಿಸಲಾಗಿದೆ. ಮಹಾಲೇಖಪಾಲರು ಉಲ್ಲೇಖ(3)ರಲ್ಲಿನ ಪತ್ರ ದಿನಾಂಕ:27.03.2015 ರಲ್ಲಿ ಸಕ್ಷಮ ಪ್ರಾಧಿಕಾರಿಗಳು ಹೊರಡಿಸುವ ಸುತ್ತೋಲೆ/ಅಧಿಸೂಚನೆಗಳನ್ನು ಉಪನಿಯಮ(4) ರಲ್ಲಿನ ಅವಕಾಶಗಳನ್ನು ಉಲ್ಲೇಖಿಸಿ ಹೊರಡಿಸುತ್ತಿಲ್ಲವೆಂದೂ, ಈ ಕಾರಣದಿಂದಾಗಿನ ವ್ಯವಹರಣೆಗಳಿಂದಾಗಿ, ಹೆಚ್ಚಿನ ಪ್ರಕರಣಗಳಲ್ಲಿ ಸಂಬಂಧಿತ ಅಧಿಕಾರಿಗಳಿಗೆ ನಗದೀಕರಣ ಪ್ರಾಧೀಕರಿಸುವಲ್ಲಿ ವಿಳಂಬವಾಗುತ್ತಿದೆ ಎಂದು ತಿಳಿಸುತ್ತಾ, ಪರಿಷ್ಕೃತ ಸೂಚನೆಗಳನ್ನು ನೀಡಬೇಕಾಗಿ ಕೋರಿದ್ದಾರೆ..

ಮೇಲೆ ವಿವರಿಸಿರುವ ಸಂದರ್ಭ ಮತ್ತು ಸನ್ನಿವೇಶದ ಹಿನ್ನೆಲೆಯಲ್ಲಿ, ಸಕ್ಷಮ ರಜೆ ಮಂಜೂರಾತಿ ಪ್ರಾಧಿಕಾರವು ಕ.ನಾ.ಸೇ.ನಿಯಮಾವಳಿ, ನಿಯಮ 118ಎ(1)ರ ರೀತ್ಯ ಅರ್ಹ ನೌಕರರ ಪ್ರಕರಣಗಳಲ್ಲಿ ನಗದೀಕರಣ ಸೌಲಭ್ಯ ಮಂಜೂರಾತಿ ಆದೇಶವನ್ನು ಹೊರಡಿಸುವಾಗ, ಸಂಬಂಧಿತ ಆದೇಶಗಳನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 118–ಎ(4) ರ ಅವಕಾಶಗಳನ್ನು ಗಮನದಲ್ಲಿರಿಸಿ ಮಂಜೂರಾತಿ ನೀಡಲಾಗಿದೆ ಎಂದು ಸ್ಪಷ್ಟವಾಗಿ ನಮೂದಿಸಿ ಹೊರಡಿಸತಕ್ಕದೆಂದು ತಿಳಿಸಲಾಗಿದೆ.

**ಜಿ.ಬಿ.ಹೇಮಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸೇವೆಗಳು–1)

PR. 4
SC. 50

## ಆರ್ಥಿಕ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ಆಇ 5 ಸೇನಿಸೇ 2015, ಬೆಂಗಳೂರು, ದಿನಾಂಕ:07–12–2015**

**ವಿಷಯ:** ಪತ್ರಾಂಕಿತ ಅಧಿಕಾರಿಗಳು ವಾರ್ಷಿಕ ವೇತನ ಬಡ್ತಿ ಪಡೆಯಲು– ಹೊಸ ಪೇ ಸ್ಲಿಪ್ ನೀಡುವ ಪದ್ಧತಿಯನ್ನು ನಿಲ್ಲಿಸುವ ಬಗ್ಗೆ.

**ಉಲ್ಲೇಖ:** (1) ಸುತ್ತೋಲೆ ಸಂಖ್ಯೆ: ಆಇ 5 ಎಸ್‌ಆರ್‌ಎಸ್ 2015, ದಿನಾಂಕ:18.08.2015

(2) ಮಹಾಲೇಖಪಾಲರ ಪತ್ರ ಸಂ.: GM/Genl/ 2015–16/112, ದಿನಾಂಕ:07.09.2015.

ಉಲ್ಲೇಖ(1) ರಲ್ಲಿನ ಸುತ್ತೋಲೆಯಲ್ಲಿ, ಪತ್ರಾಂಕಿತ ಅಧಿಕಾರಿಗಳಿಗೆ ಸಾಮಾನ್ಯ ವೇತನ ಬಡ್ತಿಗಳು ಪ್ರಾಪ್ತವಾಗುವ ಸಂದರ್ಭದಲ್ಲಿ ಅವರುಗಳು ವಾರ್ಷಿಕ ವೇತನ ಬಡ್ತಿಯನ್ನು ಸೆಳೆಯುವಲ್ಲಿ ಉಂಟಾಗಬಹುದಾದ ವಿಳಂಬವನ್ನು ತಡೆಯಲು, ಮಹಾಲೇಖಪಾಲರಿಂದ ಪಡೆಯಬೇಕಾಗಿದ್ದ ಹೊಸ ಪೇ ಸ್ಲಿಪ್ ಪದ್ಧತಿಯನ್ನು ನಿಲ್ಲಿಸಿದ್ದು, ಈ ನಿಟ್ಟಿನಲ್ಲಿ ಕೈಗೊಳ್ಳಬೇಕಾದ ವಿಧಿವಿಧಾನಗಳ ಕುರಿತು ಸೂಚನೆಗಳನ್ನು ನೀಡಲಾಗಿದೆ.

ದಿನಾಂಕ:18.08.2015 ರ ಸುತ್ತೋಲೆಯನ್ವಯ ಅಧಿಕಾರಿಗಳ ವೇತನ ಶ್ರೇಣಿ, ಮುಂದಿನ ವಾರ್ಷಿಕ ವೇತನ ಬಡ್ತಿಯ ದಿನಾಂಕ, ಷರತ್ತುಗಳನ್ನೊಳಗೊಂಡಿರುವ ಹೊಸ ಪೇ ಸ್ಲಿಪ್ ಅನ್ನು ಮಹಾಲೇಖಪಾಲರ ಕಚೇರಿಯಿಂದ ಒದಗಿಸಿದ ನಂತರವೇ ಕ್ರಮವಹಿಸುವಂತೆ ಹಾಗೂ ಈಗಾಗಲೇ ನೀಡಿರುವ ಪೇ ಸ್ಲಿಪ್‌ನ ಮೇಲೆ ಕ್ರಮಕೈಗೊಳ್ಳಬಾರದೆಂದು ಎಲ್ಲಾ ಇಲಾಖಾ ಮುಖ್ಯಸ್ಥರು ಹಾಗೂ ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಗಳಿಗೆ ಸೂಚನೆ ನೀಡುವಂತೆ ಮಹಾಲೇಖಪಾಲರು ಕೋರಿದ್ದಾರೆ.

ಈ ಹಿನ್ನೆಲೆಯಲ್ಲಿ, ಮಹಾಲೇಖಪಾಲರು ಎಲ್ಲಾ ಪತ್ರಾಂಕಿತ ಅಧಿಕಾರಿಗಳಿಗೆ ಸಂಬಂಧಪಟ್ಟಂತೆ ಅಧಿಕಾರಿಗಳ ವೇತನ ಶ್ರೇಣಿ, ಮುಂದಿನ ವಾರ್ಷಿಕ ವೇತನ ಬಡ್ತಿಯ ದಿನಾಂಕ ಮತ್ತು ಷರತ್ತುಗಳನ್ನು ಒಳಗೊಂಡಿರುವ ಹೊಸ ವೇತನ ಪಟ್ಟಿ [Pay Slip] ಒದಗಿಸಿದ ನಂತರದಲ್ಲಿ ಮಾತ್ರ ದಿನಾಂಕ:18.08.2015 ರ ಸುತ್ತೋಲೆಯಲ್ಲಿನ ಸೂಚನೆಗಳಂತೆ ಕ್ರಮತೆಗೆದುಕೊಳ್ಳಬೇಕೆಂದು ಎಲ್ಲಾ ಇಲಾಖಾ ಮುಖ್ಯಸ್ಥರು ಹಾಗೂ ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಗಳನ್ನು ಕೋರಲಾಗಿದೆ.

**ಜಿ.ಬಿ.ಹೇಮಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸೇವೆಗಳು–1)

PR. 28

## ಆರ್ಥಿಕ ಸಚಿವಾಲಯ

## ಸುತ್ತೋಲೆ

**ಸಂಖ್ಯೆ:ಆಇ 9 ಸೇನಿಸೇ 2015, ಬೆಂಗಳೂರು, ದಿನಾಂಕ 10.12.2015**

**ವಿಷಯ:** ಗೆಜೆಟೆಡ್ ಅಧಿಕಾರಿಗಳ ರಜೆ ನಿರ್ವಹಣೆ ಮತ್ತು 2015ರ ಕ್ಯಾಲೆಂಡರ್ ವರ್ಷದ ಗಳಿಕೆ ರಜೆ ನಗದೀಕರಣದ ಕುರಿತು

**ಉಲ್ಲೇಖ:** (1)ಮಹಾಲೇಖಪಾಲರ ಪತ್ರ ಸಂಖ್ಯೆ:ಜಿಎಂ/ಜನರಲ್/ ಹೆಚ್‌ಆರ್‌ಎಂಎಸ್/ 2015–16/34–36 ದಿನಾಂಕ 26.5.2015

(2) ಮಹಾಲೇಖಪಾಲರ ಪತ್ರ ಸಂಖ್ಯೆ:ಜಿಎಂ/ಜನರಲ್/ಹೆಚ್‌ಆರ್‌ಎಂಎಸ್/ 2015–16/146 ದಿನಾಂಕ 2.11.2015

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 175ರ ಪ್ರಕಾರ ಪತ್ರಾಂಕಿತ ಸರ್ಕಾರಿ ನೌಕರರ ರಜೆ ಲೆಕ್ಕವನ್ನು ಮಹಾಲೇಖಪಾಲರು ನಿರ್ವಹಿಸಬೇಕಾಗುತ್ತದೆ. ನಿಯಮ 190 ರಿಂದ 196 ರಲ್ಲಿ ತಿಳಿಸಿರುವಂತೆ ರಜೆ ಮಂಜೂರು ಮಾಡುವ ಪ್ರಾಧಿಕಾರಗಳು ರಜೆ ಲೆಕ್ಕದ ಬಗ್ಗೆ ಮಹಾಲೇಖಪಾಲರಿಂದ ಮಾಹಿತಿಯನ್ನು ಪಡೆದ ನಂತರವೇ ರಜೆ ಮಂಜೂರು ಮಾಡಬೇಕಾಗುತ್ತದೆ. ಪ್ರಸ್ತುತ ಹೆಚ್.ಆರ್.ಎಂ.ಎಸ್ ವ್ಯವಸ್ಥೆಯಡಿ ಎಲೆಕ್ಟ್ರೋನಿಕ್ ಮಾಧ್ಯಮದಲ್ಲಿ ರಜೆ ಲೆಕ್ಕವೂ ಸೇರಿದಂತೆ ಅಧಿಕಾರಿ/ನೌಕರರ ಸೇವಾ ವಿಚಾರಗಳನ್ನು ನಿರ್ವಹಿಸುವುದರಿಂದ, ಈ ವ್ಯವಸ್ಥೆಯ ಉಪಯೋಗವನ್ನು ಪಡೆದುಕೊಂಡು ಆನ್‌ಲೈನ್ ಮೂಲಕ ರಜೆ ಲೆಕ್ಕಾಚಾರ ನಿರ್ವಹಣೆ ಮಾಡಲು ಮಹಾಲೇಖಪಾಲರು ಉದ್ದೇಶಿಸಿದ್ದಾರೆ.

ಮುಂದುವರೆದಂತೆ ಪ್ರಸಕ್ತ 2015ರ ಕ್ಯಾಲೆಂಡರ್ ಅವಧಿಯ ಗಳಿಕೆ ರಜೆ ನಗದೀಕರಣ ಸೌಲಭ್ಯವನ್ನು ಅಧಿಕಾರಿಗಳು ಪಡೆಯಬೇಕಾಗಿರುವುದರಿಂದ ಈ ಸಂಬಂಧದಲ್ಲಿ ಗಳಿಕೆ ರಜೆ ಲೆಕ್ಕದ ಕುರಿತು ಮಹಾಲೇಖಪಾಲರಿಂದ ವರದಿ ಪಡೆಯುವಲ್ಲಿನ ವ್ಯವಹರಣೆಗಳಿಂದ ಆಗುವ ವಿಳಂಬದಿಂದಾಗಿನ ಅನಾನುಕೂಲಗಳನ್ನು ತಡೆಯಲು, ಮಹಾಲೇಖಪಾಲರಿಂದ ರಜೆ ಲೆಕ್ಕ ನಿರೀಕ್ಷಿಸದೆ ಹೆಚ್.ಆರ್.ಎಂ.ಎಸ್. ನಲ್ಲಿ ಲಭ್ಯವಾಗುವ ರಜೆ ಲೆಕ್ಕಾಚಾರವನ್ನು ಗಮನದಲ್ಲಿರಿಸಿ, ಗಳಿಕೆ ರಜೆ ನಗದೀಕರಣಕ್ಕೆ ಸಕ್ಷಮ ಪ್ರಾಧಿಕಾರಿಗಳು ಅನುಮತಿ ನೀಡಲು ಸೂಚನೆ ನೀಡಬೇಕೆಂದು ಮತ್ತು ಮಹಾಲೇಖಪಾಲರ ಕಛೇರಿಯು ರಜೆ ಲೆಕ್ಕಾಚಾರದ ಬಗ್ಗೆ ಪರಿಶೀಲನೆ ನಡೆಸಿ ಯಾವುದೇ ತಪ್ಪುಗಳು ಕಂಡು ಬಂದಲ್ಲಿ ರಜೆ ಪ್ರಾಧಿಕಾರದ ಗಮನಕ್ಕೆ ತರುವುದಾಗಿ ಉಲ್ಲೇಖಿತ ಪತ್ರದಲ್ಲಿ ಮಹಾಲೇಖಪಾಲರು ಸರ್ಕಾರವನ್ನು ಕೋರಿದ್ದಾರೆ.

ಈ ಹಿನ್ನೆಲೆಯಲ್ಲಿ, ಪ್ರಸ್ತುತ ಸಾಲಿನ ಗಳಿಕೆ ರಜೆ ನಗದೀಕರಣದ ಸೌಲಭ್ಯ ಮಂಜೂರಾತಿ ಪರಿಗಣನೆ ಸಂಬಂಧದಲ್ಲಿ ಗೆಜಿಟೆಟ್ ಅಧಿಕಾರಿಗಳಿಗೆ ಉಂಟಾಗುವ ವಿಳಂಬವಾಗುವುದನ್ನು ತಪ್ಪಿಸಲು ಉಲ್ಲೇಖ(2)ರ ಪತ್ರದನುಸಾರ ಮಹಾಲೇಖಪಾಲರು ಕೋರಿರುವಂತೆ, ಹೆಚ್.ಆರ್.ಎಂ.ಎಸ್.ನಲ್ಲಿ ಲಭ್ಯವಿರುವ ಅಧಿಕಾರಿಗಳ ಗಳಿಕೆ ರಜೆ ಲೆಕ್ಕಾಚಾರದ ಆಧಾರದ ಮೇಲೆ ಗಳಿಕೆ ರಜೆ ನಗದೀಕರಣವನ್ನು ಮಂಜೂರು ಮಾಡಲು ರಜೆ ಮಂಜೂರಾತಿ ಪ್ರಾಧಿಕಾರಿಗಳು ಕ್ರಮ ವಹಿಸುವಂತೆ ಸೂಚಿಸಲಾಗಿದೆ. ಮತ್ತು ಮಹಾಲೇಖಪಾಲರು ಲೆಕ್ಕಾಚಾರದ ಬಗ್ಗೆ ತಪ್ಪುಗಳನ್ನು ತಿಳಿಸಿದಲ್ಲಿ ಅದನ್ನು ಸರಿಪಡಿಸಿ ಅದರ ಅನ್ವಯ ಆರ್ಥಿಕ ಸೌಲಭ್ಯ ಮಂಜೂರು ಮಾಡಬೇಕೆಂದು ಸಹ ತಿಳಿಸಲಾಗಿದೆ.

**ಜಿ.ಬಿ.ಹೇಮಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸೇವೆಗಳು–1)

PR. 29
SC. 50

## ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಕಸಂವಾ:31ವಾಪ್ರಜಾ: 2015, ಬೆಂಗಳೂರು, ದಿನಾಂಕ: 25.11.2015.**

ಜಾಹೀರಾತು ನೀತಿ–2013ಕ್ಕೆ ಜಾರಿಗೆ ತಂದಿರುವ ನಿಯಮಗಳ ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 69 ವಾಪ್ರಜಾ 2013, ದಿ: 10.09.2014ಕ್ಕೆ ದಿ. 8.5.2015ರಂದು ತರಲಾಗಿದ್ದ ತಿದ್ದುಪಡಿ ಆದೇಶದ ಕಂಡಿಕೆ 2ಕ್ಕೆ ಈ ಕೆಳಗಿನಂತೆ ತಿದ್ದುಪಡಿ ತರಲಾಗಿದೆ.

| ದಿನಾಂಕ: 8.5.2015ರ ತಿದ್ದುಪಡಿ ಆದೇಶದಲ್ಲಿರುವ ಕಂಡಿಕೆ–2ರಲ್ಲಿ ಪ್ರಸ್ತುತ ಇರುವ ಅಂಶಗಳು | ತಿದ್ದಿ ಓದಿಕೊಳ್ಳಬೇಕಾದ ಅಂಶಗಳು |
|---|---|
| ಪ್ರಸ್ತಾವನೆ ಭಾಗದಲ್ಲಿನ ............ಸರ್ಕಾರದ ಅಧೀನದಲ್ಲಿ ಬರುವ ನಿಗಮ, ಮಂಡಳಿ, ಪ್ರಾಧಿಕಾರ, ಸ್ಥಳೀಯ ಸಂಸ್ಥೆಗಳು (ಪಂಚಾಯತ್ ರಾಜ್ ಸಂಸ್ಥೆಗಳು, ನಗರಸಭೆ, ಪುರಸಭೆ, ಮಹಾನಗರ ಪಾಲಿಕೆ) ತಮಗೆ ಸಂಬಂಧಿಸಿದ ಆಕರ್ಷಕ ಮತ್ತು ಟೆಂಡರ್ ಜಾಹೀರಾತುಗಳ ಬಿಡುಗಡೆ ಪ್ರಕ್ರಿಯೆಯನ್ನು ಆಯಾ ಸಂಸ್ಥೆಗಳೇ ನಿರ್ವಹಿಸಿಕೊಳ್ಳುವುದು ಹಾಗೂ ಈ ಸಂಸ್ಥೆಗಳು ಎಲ್ಲಾ ಜಾಹೀರಾತುಗಳನ್ನು ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯಿಂದ ಮಾನ್ಯತೆ ಪಡೆದ ಅಂಗೀಕೃತ ಜಾಹೀರಾತು ಸಂಸ್ಥೆಗಳಿಂದ ಮಾತ್ರ, ಇಲಾಖೆಯು ನಿಗದಿಪಡಿಸಿರುವ ಜಾಹೀರಾತು ದರದಲ್ಲಿ ಬಿಡುಗಡೆ ಮಾಡುವುದಕ್ಕೆ ಕ್ರಮ ಕೈಗೊಳ್ಳುವುದು. | ಸರ್ಕಾರದ ಆದೇಶ ಸಂ: ಕಸಂವಾಪ್ರ 69 ವಾಪ್ರಜಾ 2013 ದಿ: 10.09.2014ರಲ್ಲಿ ಇರುವಂತೆ " .......ಸರ್ಕಾರದ ವ್ಯಾಪ್ತಿಗೆ ಒಳಪಡುವ ಎಲ್ಲಾ ಇಲಾಖೆಗಳು, ಪಂಚಾಯತ್‌ರಾಜ್ ಸಂಸ್ಥೆಗಳು, ನಗರ ಪಾಲಿಕೆಗಳು, ಸ್ಥಳೀಯ ಸಂಸ್ಥೆಗಳು, ಪ್ರಾಧಿಕಾರ, ನಿಗಮ, ಮಂಡಳಿಗಳಿಗೆ ಸಂಬಂಧಿಸಿದ ಜಾಹೀರಾತುಗಳನ್ನು ಕಡ್ಡಾಯವಾಗಿ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಮುಖಾಂತರವೇ ಈ ಕೆಳಕಂಡಂತೆ ರೂಪಿಸಿರುವ ನಿಯಮಗಳನ್ವಯ ಬಿಡುಗಡೆ ಮಾಡತಕ್ಕದ್ದು" |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ. ಮಂಜುಳ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ (ವಾರ್ತಾ ಶಾಖೆ)

PR. 26

## ಆರ್ಥಿಕ ಸಚಿವಾಲಯ

### ಸೇರ್ಪಡೆ

**ಸಂ: ಆಇ 12 ಎಸ್‌ಆರ್‌ಪಿ 2012 (IX) ಬೆಂಗಳೂರು, ದಿನಾಂಕ: 10.09.2015.**

ದಿನಾಂಕ: 14.06.2012ರ ಸರ್ಕಾರಿ ಆದೇಶ ಸಂಖ್ಯೆ: ಆಇ 12 ಎಸ್‌ಆರ್‌ಪಿ 2012 **(IX)** ನ್ನು ಮುಂದುವರೆಸುತ್ತಾ, ಸದರಿ ಆದೇಶದ ಅನುಬಂಧದಲ್ಲಿನ ಕ್ರಮ ಸಂ: **26 (2) (v) `DPAR (Accounts-2(3) Budget and ADA Section'** ಶೀರ್ಷಿಕೆಯ ನಂತರ ಈ ಕೆಳಗಿನ ನಮೂದುಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

**26 (2) (vi) DPAR (Accounts-3)**

| ಕ್ರಮ ಸಂ. | ಹುದ್ದೆಗಳ ವರ್ಗ | ವಿಶೇಷ ಭತ್ಯೆಯ ದರ (ಮಾಸಿಕ ರೂ.) | ಜಾರಿಗೆ ಬರುವ ದಿನಾಂಕ |
|---|---|---|---|
| (a) | Under Secretary DPAR (Accounts-3)-1 Post | 300 | 30.07.2012 |
| (b) | Section Officer DPAR (Accounts-3-Cash-1)-1 Post | 250 | 03.06.2013 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಸ್. ರಾಜಲಕ್ಷ್ಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು–2).

**PR. 61**

**SC. 100**

## ಸಹಕಾರ ಸಚಿವಾಲಯ

**ವಿಷಯ:** 2015–16ನೇ ಸಾಲಿಗೆ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಡಿಯಲ್ಲಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಸಇ 22 ಆಂಆಸ 2015, ಬೆಂಗಳೂರು, ದಿನಾಂಕ:08.05.2015.
2. ಸರ್ಕಾರದ ಆದೇಶ ಸಂಖ್ಯೆ ಸಿಒ 186 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ:16.06.2015.ಮತ್ತು 03–09–2015
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಸಿಆರ್‌ಡಿ/ ಸಿಎಬಿ–1/07/2014–15, ದಿನಾಂಕ:16.12.2015.
4. ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ/04/ಟಿಎಫ್‌ಪಿ,2015 ಬೆಂಗಳೂರು, ದಿನಾಂಕ: 09.10.2015.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ 2015–16ನೇ ಸಾಲಿನ ಮುಂದುವರೆದ ಯೋಜನೆಯಾದ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425–00–107–2–41 ರಡಿ ಒಟ್ಟು ರೂ.73741.00 ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ:01.04.2015 ರಿಂದ 31.03.2016 ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಲ್ಲಿ ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ರಿಯಾಯತಿ ಬಡ್ಡಿ ದರದಲ್ಲಿ ನೀಡಿದ ಸಾಲಗಳ ಪೈಕಿ ವಸೂಲಾಗಿರುವ ಸಾಲಗಳ ಬಡ್ಡಿಯ ವ್ಯತ್ಯಾಸದ ಬಡ್ಡಿ ಸಹಾಯಧನ ರೂ.18435.25 ಲಕ್ಷ (ಹದಿನೆಂಟು ಸಾವಿರದ ನಾಲ್ಕುನೂರಾ ಮೂವತ್ತೈದು ಲಕ್ಷದ ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳನ್ನು 2015–16ನೇ ಸಾಲಿನ ಮೊದಲನೆ ಮತ್ತು ಎರಡನೇ ತ್ರೈಮಾಸಿಕದಲ್ಲಿ ಕ್ರಮವಾಗಿ ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯಡಿ ರೂ.18435.25 ಲಕ್ಷಗಳ ಅನುದಾನವನ್ನು ಮೂರನೇ ಕಂತಿನಲ್ಲಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಓದಲಾದ (2)ರ ಆದೇಶಗಳಲ್ಲಿ ಬಿಡುಗಡೆ ಮಾಡಿದ ಎರಡನೇ ಕಂತಿನ ಹಣ ರೂ.18435.25 ಲಕ್ಷಗಳ ಅನುದಾನ ಸಂಪೂರ್ಣ ಖರ್ಚು ಮಾಡಲಾಗಿದೆ ಎಂದು ದೃಢೀಕೃತ ಬಳಕೆ ಪ್ರಮಾಣ ಪತ್ರ ನೀಡಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ.10 ಕೋಟಿ ವರೆಗಿನ ಮತ್ತು ಅದಕ್ಕಿಂತ ಹೆಚ್ಚಿನ ಆಯವ್ಯಯ ಅವಕಾಶದ ಶೇ.25 ಅನ್ನು ಮೂರನೇ ಕಂತಿನಲ್ಲಿ ಈಗಾಗಲೇ ಬಿಡುಗಡೆ ಮಾಡಿದ ಮೊತ್ತದ ಶೇ.75ರಷ್ಟು ಅನುದಾನ ಬಳಕೆ ಮಾಡಿದ ಬಗ್ಗೆ ಬಳಕೆ ಪ್ರಮಾಣ ಪತ್ರ ಒದಗಿಸುವ ಷರತ್ತಿಗೆ ಒಳಪಟ್ಟು ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯ ಸಹಮತಿ ಇದೆಯೆಂದು ತಿಳಿದು ಬಿಡುಗಡೆ ಮಾಡಲು ಅವಕಾಶ ಇರುತ್ತದೆ.

ಸರ್ಕಾರವು ನಿಬಂಧಕರ ಪ್ರಸ್ತಾವನೆಯನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಒ 186 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ:22.12.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಲ್ಲಿ ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ರಿಯಾಯತಿ ಬಡ್ಡಿ ದರದಲ್ಲಿ ನೀಡಿದ ಸಾಲಗಳ ಪೈಕಿ ವಸೂಲಾಗಿರುವ ಸಾಲಗಳ ಬಡ್ಡಿಯ ವ್ಯತ್ಯಾಸದ ಬಡ್ಡಿ ಸಹಾಯಧನ ರೂ.18435.25 ಲಕ್ಷ (ಹದಿನೆಂಟು ಸಾವಿರದ ನಾಲ್ಕುನೂರಾ ಮೂವತ್ತೈದು ಲಕ್ಷ ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಗಳನ್ನು 2015–16ನೇ ಸಾಲಿನ ಮೂರನೇ ತ್ರೈಮಾಸಿಕದಲ್ಲಿ ಕೆಳಕಂಡಂತೆ ಬಿಡುಗಡೆ ಮಾಡಲಾಗಿದೆ:

**ಯೋಜನೆ:** ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ

**ಲೆಕ್ಕಶೀರ್ಷಿಕೆ:** 2425–00–107–2–41 (ರೂ.ಲಕ್ಷಗಳಲ್ಲಿ)

| | |
|---|---|
| 106–ಸಾಮಾನ್ಯ | 16829.00 |
| 422–ವಿಶೇಷ ಘಟಕ ಯೋಜನೆ | 847.25 |
| 423–ಗಿರಿಜನ ಉಪ ಯೋಜನೆ | 759.00 |
| **ಒಟ್ಟು** | 18435.25 |

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿ ಠೇವಣಿಸಿ, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡುವುದು ಮತ್ತು ಈ ಹಣವನ್ನು ಸಂಬಂಧಿಸಿದ ಫಲಾನುಭವಿಗಳ ಖಾತೆಗೆ ಕೂಡಲೇ ಬಿಡುಗಡೆ ಮಾಡಿ, ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 4 ಟಿಎಫ್‌ಪಿ 2015, ದಿನಾಂಕ:09.10.2015ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಮತ್ತು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಸಇ 163 ಆಂಆಸ 2015, ದಿನಾಂಕ:21.12.2015 ರಂದು ನೀಡಿದ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 43**
**SC. 25**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** 2015–16ನೇ ಸಾಲಿಗೆ ಶ್ರೀ "ಡಿ.ದೇವರಾಜ ಅರಸು" ರವರ ಹೆಸರಿನಲ್ಲಿ 100 ಸಂಖ್ಯಾಬಲದ 100 ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ:** 1) 2015–16ನೇ ಸಾಲಿನ ಆಯವ್ಯಯ ಭಾಷಣದ ಘೋಷಣೆ ಕಂಡಿಕೆ ಸಂ:219

2) ಏಕ ಕಡತ ಸಂಖ್ಯೆ:ಹಿಂವಕ/ವನಿಶಾ–2/ಸಿಆರ್–11/ 2015–16, ದಿನಾಂಕ:4.5.2015.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಂತೆ, ಮಾನ್ಯ ಮುಖ್ಯಮಂತ್ರಿಗಳು ಮಂಡಿಸಿದ 2015–16ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 219 ರಲ್ಲಿ ಡಿ.ದೇವರಾಜ ಅರಸು ರವರ ಜನ್ಮ ಶತಮಾನೋತ್ಸವದ ಅಂಗವಾಗಿ "ಡಿ.ದೇವರಾಜ ಅರಸು" ರವರ ಹೆಸರಿನಲ್ಲಿ 100 ಸಂಖ್ಯಾಬಲದ 100 ಮೆಟ್ರಿಕ್ ನಂತರದ ಬಾಲಕಿಯರ ವಸತಿ ನಿಲಯಗಳನ್ನು ಪ್ರಾರಂಭಿಸಲಾಗುವುದು" ಎಂದು ಘೋಷಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರು ಹಿಂದುಳಿದ ವರ್ಗಗಳ ನೇತಾರ, ಮಾಜಿ ಮುಖ್ಯಮಂತ್ರಿ ಶ್ರೀ ಡಿ.ದೇವರಾಜ ಅರಸು ರವರು ಜನಿಸಿ 100 ವರ್ಷಗಳಾಗುತ್ತಿರುವ ಹಿನ್ನೆಲೆಯಲ್ಲಿ ಸರ್ಕಾರವು 2015ನೇ ವರ್ಷವನ್ನು ದೇವರಾಜ ಅರಸು ಶತಮಾನೋತ್ಸವ ವರ್ಷವೆಂದು ಆಚರಿಸಲು ನಿರ್ಧರಿಸಿದ್ದು, ಈ ಹಿನ್ನೆಲೆಯಲ್ಲಿ ಹಲವಾರು ಅರ್ಥಪೂರ್ಣ ಕಾರ್ಯಕ್ರಮಗಳನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಮೂಲಕ ಜಾರಿಗೆ ತರಲಾಗುತ್ತಿದೆ. ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ 414 ಬಾಲಕಿಯರ ವಿದ್ಯಾರ್ಥಿನಿಲಯಗಳಿದ್ದು, 43602 ವಿದ್ಯಾರ್ಥಿನಿಯರಿಗೆ ಪ್ರವೇಶಾವಕಾಶ ಕಲ್ಪಿಸಲಾಗಿದೆ. ರಾಜ್ಯದಾದ್ಯಂತ ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯಗಳಿಗೆ ಬೇಡಿಕೆ ಇದ್ದು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯಗಳಿಗೆ ಪ್ರವೇಶ ಕೋರಿ ಅರ್ಜಿ ಸಲ್ಲಿಸುವ ವಿದ್ಯಾರ್ಥಿನಿಯರ ಸಂಖ್ಯೆ ಹೆಚ್ಚಿಗೆ ಇದ್ದು, ವಿದ್ಯಾರ್ಥಿನಿಯರು ಗ್ರಾಮೀಣ ಪ್ರದೇಶ ಹಾಗೂ ದೂರದ ಊರುಗಳಿಂದ ವ್ಯಾಸಂಗಕ್ಕೆ ನಗರ ಪ್ರದೇಶಗಳಿಗೆ ಹಾಗೂ ಶೈಕ್ಷಣಿಕ ಕೇಂದ್ರಗಳಿಗೆ ಬರುವುದರಿಂದ ಈ ವಿದ್ಯಾರ್ಥಿನಿಯರ ವಾಸಕ್ಕಾಗಿ ವಿದ್ಯಾರ್ಥಿನಿಲಯಗಳನ್ನು ಕಲ್ಪಿಸುವುದು ಅವಶ್ಯವಿರುತ್ತದೆ.

ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ ದೊರಕದ ವಿದ್ಯಾರ್ಥಿಗಳಿಗಾಗಿ ವಿದ್ಯಾಸಿರಿ ಕಾರ್ಯಕ್ರಮವನ್ನು ಜಾರಿಗೆ ತರಲಾಗಿದ್ದರೂ ಸಹ ವಿದ್ಯಾರ್ಥಿನಿಯರು ಖಾಸಗಿ ಬಾಡಿಗೆ ಕಟ್ಟಡದಲ್ಲಿ ವಾಸ್ತವ್ಯ ಮಾಡಿಕೊಂಡು, ಸೂಕ್ತ ಭದ್ರತೆ ಹಾಗೂ ರಕ್ಷಣೆಯ ಕೊರತೆಯಿಂದಾಗಿ ತಮ್ಮ ವ್ಯಾಸಂಗವನ್ನು ಮುಂದುವರೆಸಲು ಕಷ್ಟಸಾಧ್ಯವಾಗಿದೆ. ಆದರೆ ಪುರುಷ ವಿದ್ಯಾರ್ಥಿಗಳಿಗೆ ಈ ಸಮಸ್ಯೆ ಉದ್ಭವವಾಗುವುದಿಲ್ಲ.

ಮಾನ್ಯ ಮುಖ್ಯಮಂತ್ರಿಗಳ ಆಯವ್ಯಯ ಘೋಷಣೆಯಂತೆ, ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯಗಳನ್ನು ರಾಜ್ಯದಾದ್ಯಂತ ಪ್ರಾರಂಭಿಸಬೇಕಿದ್ದು, ಜಿಲ್ಲಾವಾರು ಬೇಡಿಕೆಯಿರುವ ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯಗಳ ಮಾಹಿತಿಯನ್ನು ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗಿರುತ್ತದೆ.

ಅ) ಜಿಲ್ಲಾ ಪಂಚಾಯತ್‌ಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಮೂಲಕ ಲಭ್ಯವಿರುವ ಕಾಲೇಜುಗಳು ಹಾಗೂ ವಿದ್ಯಾರ್ಥಿಗಳು ಮತ್ತು ಕಾಲೇಜಿನಿಂದ 5 ಕಿ.ಮೀ ವ್ಯಾಪ್ತಿಯಲ್ಲಿರುವ ವಿದ್ಯಾರ್ಥಿನಿಲಯಗಳನ್ನು ಮ್ಯಾಪಿಂಗ್ ಮಾಡಿಸಿದ್ದು, ವಿದ್ಯಾರ್ಥಿನಿಲಯಗಳ ಅವಶ್ಯಕತೆಯನ್ನು ಗುರುತಿಸಲಾಗಿದೆ.

ಆ) ಡಾ:ನಂಜುಂಡಪ್ಪ ವರದಿ ಪ್ರಕಾರ ಅತ್ಯಂತ ಹಿಂದುಳಿದ, ಅತೀ ಹಿಂದುಳಿದ ಹಾಗೂ ಹಿಂದುಳಿದ ತಾಲ್ಲೂಕುಗಳನ್ನು ಗಮನದಲ್ಲಿಟ್ಟುಕೊಂಡು, ಅದರಲ್ಲಿ ಅತ್ಯಂತ ಹಿಂದುಳಿದ ಹಾಗೂ ಅತೀ ಹಿಂದುಳಿದ ಪ್ರದೇಶಕ್ಕೆ ಆದ್ಯತೆ ನೀಡಲಾಗಿದ್ದು, ಅತ್ಯಂತ ಹಿಂದುಳಿದ 50, ಅತೀ ಹಿಂದುಳಿದ 30 ಹಾಗೂ 20 ಹಿಂದುಳಿದ ಸ್ಥಳಗಳಲ್ಲಿ ವಿದ್ಯಾರ್ಥಿನಿಲಯಗಳನ್ನು ಮಂಜೂರು ಮಾಡಲು ಪ್ರಸ್ತಾಪಿಸಲಾಗಿದೆ.

ಇ) ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯಗಳು ತಾಲ್ಲುಕು ಕೇಂದ್ರಗಳಲ್ಲಿ ಇದುವರೆಗೆ ಮಂಜೂರಾಗದೇ ಇರುವ ತಾಲ್ಲೂಕು ಕೇಂದ್ರಗಳನ್ನು ಪರಿಗಣಿಸಲಾಗಿದೆ.

ಈ) 2014-15ನೇ ಸಾಲಿನಲ್ಲಿ ವಿದ್ಯಾರ್ಥಿನಿಲಯಗಳ ಪ್ರವೇಶ ಕೋರಿ ಅರ್ಜಿ ಸಲ್ಲಿಸಿದ್ದು, ಪ್ರವೇಶ ಸಿಗದ ವಿದ್ಯಾರ್ಥಿನಿಯರ ಸಂಖ್ಯೆ 50 ಕ್ಕಿಂತ ಹೆಚ್ಚಿದಲ್ಲಿ ಹಾಗೂ ವಿಶ್ವವಿದ್ಯಾನಿಲಯದ ಕೇಂದ್ರ ಸ್ಥಾನಗಳಲ್ಲಿ ಮತ್ತು ಜಿಲ್ಲಾ ಕೇಂದ್ರಗಳಲ್ಲಿ ಹೆಚ್ಚಿನ ಬೇಡಿಕೆ ಇರುವ ಸ್ಥಳಗಳನ್ನು ಆದ್ಯತೆ ಮೇರೆಗೆ ಪರಿಗಣಿಸಲಾಗಿದೆ.

ಉ) 2013-14ನೇ ಸಾಲಿನಲ್ಲಿ ಮಾನ್ಯ ಮುಖ್ಯಮಂತ್ರಿಗಳು ನಗರ/ಪಟ್ಟಣ ಪ್ರದೇಶಗಳಲ್ಲಿ ಮಹಿಳೆಯರಿಗಾಗಿ 100 ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸುವುದಾಗಿ ಘೋಷಿಸಿದ್ದು, ಘೋಷಣೆಯ ಹಿನ್ನೆಲೆಯಲ್ಲಿ 100ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳನ್ನು ಮಂಜೂರು ಮಾಡಲು ಸಲ್ಲಿಸಿರುವ ಪ್ರಸ್ತಾವನೆಯಲ್ಲಿರುವ ವಿದ್ಯಾರ್ಥಿನಿಲಯಗಳನ್ನು ಹೊರತುಪಡಿಸಿ, ಹೊಸ ಸ್ಥಳಗಳನ್ನು ಪ್ರಸ್ತಾಪಿಸಿದ್ದು, ಮಂಜೂರಾತಿ ನೀಡಲು ಪ್ರಸ್ತಾಪಿಸಿರುವ ವಿದ್ಯಾರ್ಥಿ ನಿಲಯಗಳ ಪಟ್ಟಿಯನ್ನು ಅನುಬಂಧದಲ್ಲಿ ನೀಡಲಾಗಿದೆ.

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ "ಡಿ.ದೇವರಾಜ ಅರಸು" ಅವರ ಹೆಸರಿನಲ್ಲಿ 100 ಸಂಖ್ಯಾಬಲದ 100 ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಬೇಕಿದ್ದು, ಹೊಸ ವಿದ್ಯಾರ್ಥಿನಿಲಯಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಹಿಂವಕ 388 ಬಿಇಟಿ 2013, ದಿನಾಂಕ:27.12.2013 ರ ಪ್ರಕಾರ 100 ಸಂಖ್ಯಾಬಲದ ಒಂದು ವಿದ್ಯಾರ್ಥಿನಿಲಯಕ್ಕೆ ಈ ಕೆಳಗಿನಂತೆ ವಿವಿಧ ಹುದ್ದೆಗಳನ್ನು ಮಂಜೂರು ಮಾಡಬೇಕಾಗಿರುತ್ತದೆ.

| ಕ್ರ ಸಂ | ವಿವರ | ವೇತನ ಶ್ರೇಣಿ (ರೂ.) | ಒಂದು ವಿದ್ಯಾರ್ಥಿನಿಲಯಕ್ಕೆ ಮಂಜೂರು ಮಾಡಬೇಕಾದ ಹುದ್ದೆಗಳ ಸಂಖ್ಯೆ |
|---|---|---|---|
| 1 | ನಿಲಯ ಮೇಲ್ವಿಚಾರಕರು | 14550-26700 | 1 |
| 2 | ಅಡುಗೆಯವರು | 10400-16400 | 2 |
| 3 | ಅಡುಗೆ ಸಹಾಯಕರು | 9600-14550 | 3 |
| 4 | ರಾತ್ರಿ ಕಾವಲುಗಾರರು | 9600-14550 | 1 |
| | **ಒಟ್ಟು** | | **7** |

ಹೊಸದಾಗಿ ಪ್ರಾರಂಭ ಮಾಡಲಾಗುವ ವಿದ್ಯಾರ್ಥಿನಿಲಯಗಳಿಗೆ ತಗಲುವ ವೆಚ್ಚವನ್ನು ರಾಜ್ಯವಲಯ ಯೋಜನೆ ಲೆಕ್ಕ ಶೀರ್ಷಿಕೆ 2225-03-277-2-53 ರ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗಾಗಿ ಹೊಸ ವಿದ್ಯಾರ್ಥಿನಿಲಯಗಳ ಪ್ರಾರಂಭ ಮತ್ತು ನಿರ್ವಹಣೆ" ರಡಿ 2015-16ನೇ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸಲಾಗುವುದು. ಇದಕ್ಕಾಗಿ ಹೆಚ್ಚುವರಿ ಅನುದಾನ ಒದಗಿಸುವ ಅವಶ್ಯಕತೆ ಇರುವುದಿಲ್ಲ. 2015-16ನೇ ಸಾಲಿಗೆ ಈ ಲೆಕ್ಕ ಶೀರ್ಷಿಕೆಯಡಿ ಒಟ್ಟಾರೆ ರೂ.18440.00 ಲಕ್ಷಗಳನ್ನು ಒದಗಿಸಲಾಗಿದೆ.

ಈ ವಿದ್ಯಾರ್ಥಿನಿಲಯಗಳನ್ನು ಕೂಡಲೇ ಮಂಜೂರು ಮಾಡಿದ್ದಲ್ಲಿ, ಎಲ್ಲಾ ಪೂರ್ವ ಸಿದ್ದತೆಗಳನ್ನು ಮಾಡಿಕೊಂಡು, 2015-16ನೇ ಸಾಲಿನ ಶೈಕ್ಷಣಿಕ ವರ್ಷದ ಜುಲೈ 2015 ರಿಂದ ಪ್ರಾರಂಭಿಸಲು ಸಾಧ್ಯವಾಗುತ್ತದೆ.

ಈ ಹಿನ್ನೆಲೆಯಲ್ಲಿ ಶ್ರೀ "ಡಿ.ದೇವರಾಜ ಅರಸು" ರವರ ಹೆಸರಿನಲ್ಲಿ 100 ಸಂಖ್ಯಾಬಲದ 100 ಮೆಟ್ರಿಕ್ ನಂತರದ ಶ್ರೀ "ಡಿ.ದೇವರಾಜ ಅರಸು ಬಾಲಕಿಯರ ವಿದ್ಯಾರ್ಥಿನಿಲಯ" ಗಳನ್ನು (ಅನುಬಂಧದಲ್ಲಿರುವಂತೆ) ಹುದ್ದೆಗಳ ಸಹಿತ ಮಂಜೂರು ಮಾಡುವಂತೆ ಪ್ರಸ್ತಾವನೆ ಸಲ್ಲಿಸಿ, ಈ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹಿಂವಕ 416 ಬಿಇಟಿ 2015, ಬೆಂಗಳೂರು ದಿನಾಂಕ:01–01–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ 100 ಸಂಖ್ಯಾಬಲದ 100 ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿರುವಂತೆ ಪ್ರಾರಂಭಿಸಲು ಹಾಗೂ ಈ ಕೆಳಕಂಡ ಹುದ್ದೆಗಳೊಂದಿಗೆ ಸೃಜಿಸಲು ಮಂಜೂರಾತಿ ನೀಡಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಪದನಾಮ | ಹುದ್ದೆಗಳ ಸಂಖ್ಯೆ | | ಷರಾ |
|---|---|---|---|---|
| | | ಒಂದು ವಿದ್ಯಾರ್ಥಿ ನಿಲಯಕ್ಕೆ | 100 ವಿದ್ಯಾರ್ಥಿ ನಿಲಯಕ್ಕೆ | |
| 1 | ನಿಲಯ ಮೇಲ್ವಿಚಾರಕರು | 01 | 100 | ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ |
| 2 | ಅಡುಗೆಯವರು | 02 | 200 | ಹೊರಸಂಪನ್ಮೂಲ |
| 3 | ಅಡುಗೆ ಸಹಾಯಕರು | 03 | 300 | |
| 4 | ರಾತ್ರಿ ಕಾವಲುಗಾರರು | 01 | 100 | |
| | **ಒಟ್ಟು** | **07** | **700** | |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 786 ವೆಚ್ಚ–3/2015, ದಿನಾಂಕ: 29.12.2015 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಆರ್.ಎರೆಕುಪ್ಪಿ**

ಸರ್ಕಾರದ ಅಧೀನ ಕಾರ್ಯದರ್ಶಿ–1

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ: ಹಿಂವಕ 416 ಬಿಇಟಿ 2015, ದಿ:01–01–2016ಕ್ಕೆ ಅನುಬಂಧ**

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕು/ಕ್ಷೇತ್ರದ ಹೆಸರು | ಕ್ರ. ಸಂ. | ಮಂಜೂರು ಮಾಡಬೇಕಾಗಿರುವ ಸ್ಥಳ | ಮಂಜೂರು ಮಾಡಬೇಕಾಗಿರುವ ಸಂಖ್ಯಾಬಲ |
|---|---|---|---|---|---|
| **1** | **2** | **3** | **4** | **5** | **6** |
| 1 | ಬೆಂಗಳೂರು ನಗರ | ಆನೇಕಲ್ | 1 | ಆನೇಕಲ್ ಟೌನ್ | 100 |
| | ಬೆಂಗಳೂರು ನಗರ | ಆನೇಕಲ್ | 2 | ಬನ್ನೇರುಘಟ್ಟ | 100 |
| | | ಬೆಂಗಳೂರು ಉತ್ತರ | 3 | ಯಲಹಂಕ | 100 |
| | | ಬೆಂಗಳೂರು ದಕ್ಷಿಣ | 4 | ಜಯನಗರ | 100 |
| | | ಬೆಂಗಳೂರು ಪೂರ್ವ | 5 | ಕೆ.ಆರ್. ಪುರಂ | 100 |
| 2 | ಬೆಂಗಳೂರು ಗ್ರಾಮಾಂತರ | ದೇವನಹಳ್ಳಿ | 6 | ವಿಜಯಪುರ | 100 |
| 3 | ಬಾಗಲಕೋಟೆ | ಹುನಗುಂದ | 7 | ಹುನಗುಂದ ಟೌನ್ | 100 |
| 4 | ಬೆಳಗಾವಿ | ಗೋಕಾಕ್ | 8 | ಮೂಡಲಗಿ | 100 |
| | | ಸವದತ್ತಿ | 9 | ಮುನವಳ್ಳಿ | 100 |
| | | ಹುಕ್ಕೇರಿ | 10 | ನಿಡಸೋಸಿ | 100 |
| | | ರಾಯಭಾಗ | 11 | ಹಾರೋಗೇರಿ | 100 |
| | | ನಿಪ್ಪಾಣಿ ಕ್ಷೇತ್ರ | 12 | ನಿಪ್ಪಾಣಿ ಟೌನ್ | 100 |
| | | ಕುಡಚಿ ಕ್ಷೇತ್ರ | 13 | ಮುಗಳಖೋಡ | 100 |

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕು/ಕ್ಷೇತ್ರದ ಹೆಸರು | ಕ್ರ. ಸಂ. | ಮಂಜೂರು ಮಾಡಬೇಕಾಗಿರುವ ಸ್ಥಳ | ಮಂಜೂರು ಮಾಡಬೇಕಾಗಿರುವ ಸಂಖ್ಯಾಬಲ |
|---|---|---|---|---|---|
| 1 | 2 | 3 | 4 | 5 | 6 |
| 5 | ಬಳ್ಳಾರಿ | ಕೂಡ್ಲಿಗಿ | 14 | ಕೊಟ್ಟೂರು | 100 |
| | | ಹಗರಿಬೊಮ್ಮನಹಳ್ಳಿ | 15 | ಚಿಂತ್ರಪಳ್ಳಿ | 100 |
| | | ಹಗರಿಬೊಮ್ಮನಹಳ್ಳಿ | 16 | ಬಾಚಿಗೊಂಡನಹಳ್ಳಿ | 100 |
| 6 | ಬೀದರ್ | ಹುಮನಾಬಾದ್ | 17 | ಚಿಟಗುಪ್ಪ | 100 |
| | | ಬಸವ ಕಲ್ಯಾಣ | 18 | ಬಸವ ಕಲ್ಯಾಣ ಟೌನ್ | 100 |
| 7 | ವಿಜಯಪುರ | ಇಂಡಿ | 19 | ಚಡಚಣ | 100 |
| | | ಇಂಡಿ | 20 | ಝಳಕಿ | 100 |
| | | ಇಂಡಿ | 21 | ತಾಂಬಾ | 100 |
| | | ಬಸವನ ಬಾಗೇವಾಡಿ | 22 | ಮನಗೂಳಿ | 100 |
| | | ಬಸವನ ಬಾಗೇವಾಡಿ | 23 | ಹೂವಿನ ಹಿಪ್ಪರಗಿ | 100 |
| | | ಮುದ್ದೇಬಿಹಾಳ | 24 | ತಾಳಿಕೋಟೆ | 100 |
| | | ಸಿಂಧಗಿ | 25 | ಅಲಮೇಲ | 100 |
| | | ವಿಜಯಪುರ | 26 | ಬಬಲೇಶ್ವರ | 100 |
| | | ವಿಜಯಪುರ | 27 | ತಿಕೋಟ | 100 |
| 8 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | 28 | ಚೇಳೂರು | 100 |
| | | ಚಿಂತಾಮಣಿ | 29 | ರೇಷ್ಮೆ ಕೃಷಿ ವಿಶ್ವವಿದ್ಯಾಲಯ ಆವರಣ | 100 |
| 9 | ಚಿಕ್ಕಮಗಳೂರು | ಕಡೂರು | 30 | ಸಖರಾಯಪಟ್ಟಣ | 100 |
| 10 | ಚಾಮರಾಜನಗರ | ಚಾಮರಾಜನಗರ | 31 | ಚಾಮರಾಜನಗರ ಟೌನ್ | 100 |
| | | ಕೊಳ್ಳೇಗಾಲ | 32 | ಹನೂರು | 100 |
| 11 | ಚಿತ್ರದುರ್ಗ | ಹೊಸದುರ್ಗ | 33 | ಶ್ರೀರಾಂಪುರ | 100 |
| | | ಹೊಸದುರ್ಗ | 34 | ಸಾಣೆಹಳ್ಳಿ | 100 |
| | | ಹಿರಿಯೂರು | 35 | ಧರ್ಮಪುರ | 100 |
| | | ಚಳ್ಳಕೆರೆ | 36 | ನಾಯಕನಹಟ್ಟಿ | 100 |
| | | ಚಳ್ಳಕೆರೆ | 37 | ಚಳ್ಳಕೆರೆ ಟೌನ್ | 100 |
| | | ಹೊಳಲ್ಕೆರೆ | 38 | ಗೋಪ್ಪೇನಹಳ್ಳಿ | 100 |
| | | ಹೊಳಲ್ಕೆರೆ | 39 | ಮುತ್ತುಗದೂರು | 100 |
| 12 | ದಕ್ಷಿಣ ಕನ್ನಡ | ಸುಳ್ಯ | 40 | ಬೆಳ್ಳಾರೆ | 100 |
| | | ಸುಳ್ಯ | 41 | ಕೊಡಿಯಾಲ್‌ಬೈಲ್ | 100 |
| | | ಪುತ್ತೂರು | 42 | ಪುತ್ತೂರು ಟೌನ್ | 100 |
| 13 | ದಾವಣಗೆರೆ | ಹರಪನಹಳ್ಳಿ | 43 | ಹರಪನಹಳ್ಳಿ ಟೌನ್ | 100 |
| | | ಚನ್ನಗಿರಿ | 44 | ಬಸವಾಪಟ್ಟಣ | 100 |
| | | ಚನ್ನಗಿರಿ | 45 | ಸಂತೇಬೆನ್ನೂರು | 100 |
| | | ಹೊನ್ನಾಳಿ | 46 | ನ್ಯಾಮತಿ | 100 |
| | | ಜಗಳೂರು | 47 | ಮುಸ್ಟೂರು | 100 |
| | | ಜಗಳೂರು | 48 | ಸೊಕ್ಕೆ | 100 |

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕು/ಕ್ಷೇತ್ರದ ಹೆಸರು | ಕ್ರ. ಸಂ. | ಮಂಜೂರು ಮಾಡಬೇಕಾಗಿರುವ ಸ್ಥಳ | ಮಂಜೂರು ಮಾಡಬೇಕಾಗಿರುವ ಸಂಖ್ಯಾಬಲ |
|---|---|---|---|---|---|
| 1 | 2 | 3 | 4 | 5 | 6 |
| | | ಹರಿಹರ | 49 | ಮಲೆಬೆನ್ನೂರು | 100 |
| | | ಹರಿಹರ | 50 | ಹರಿಹರ ಟೌನ್ | 100 |
| 14 | ಕಲಬುರಗಿ | ಸೇಡಂ | 51 | ಮುಧೋಳ | 100 |
| | | ಚಿತ್ತಾಪುರ | 52 | ವಾಡಿ (ಜಂಕ್ಷನ್) | 100 |
| | | ಚಿಂಚೋಳಿ | 53 | ಸುಲೇಪೇಟ್ | 100 |
| | | ಆಳಂದ | 54 | ಕಡಗಂಚಿ | 100 |
| 15 | ಕೋಲಾರ | ಮುಳಬಾಗಿಲು | 55 | ರಾಯಲಮಾನದಿನ್ನ | 100 |
| 16 | ಗದಗ | ಶಿರಹಟ್ಟಿ | 56 | ಬೆಳ್ಳಟ್ಟಿ | 100 |
| | | ಶಿರಹಟ್ಟಿ | 57 | ಶಿಗ್ಲಿ | 100 |
| | | ರೋಣ | 58 | ಮುಂಡರಗಿ | 100 |
| | | ಮುಂಡರಗಿ | 59 | ಕಲ್ಕೆರೆ | 100 |
| | | ಮುಂಡರಗಿ | 60 | ಪೇಟಾಲೂರು | 100 |
| | | ಗದಗ | 61 | ಹೊಂಬಳ | 100 |
| 17 | ಹಾಸನ | ಹೊಳೆನರಸೀಪುರ | 62 | ಪಡವಹಿಪ್ಪೆ | 100 |
| | | ಹೊಳೆನರಸೀಪುರ | 63 | ಹೊಳೆನರಸೀಪುರ ಟೌನ್ | 100 |
| | | ಚನ್ನರಾಯಪಟ್ಟಣ | 64 | ಹಿರಿಸಾವೆ | 100 |
| | | ಚನ್ನರಾಯಪಟ್ಟಣ | 65 | ಚನ್ನರಾಯಪಟ್ಟಣ ಟೌನ್ | 100 |
| | | ಹಾಸನ | 66 | ಹಾಸನ ಟೌನ್ | 100 |
| 18 | ಹಾವೇರಿ | ಹಿರೇಕೆರೂರ | 67 | ಮೇದೂರು | 100 |
| | | ರಾಣೇಬೆನ್ನೂರು | 68 | ರಾಣೇಬೆನ್ನೂರು ಟೌನ್ | 100 |
| | | ಹಾನಗಲ್ | 69 | ಹಾನಗಲ್ ಟೌನ್ | 100 |
| 19 | ಕೊಡಗು | ಸೋಮವಾರಪೇಟೆ | 70 | ಕುಶಾಲನಗರ | 100 |
| 20 | ಕೊಪ್ಪಳ | ಕುಷ್ಟಗಿ | 71 | ತಾವರೆಗೇರಾ | 100 |
| | | ಕುಷ್ಟಗಿ | 72 | ಕುಷ್ಟಗಿ ಟೌನ್ | 100 |
| | | ಯಲ್ಬುರ್ಗಾ | 73 | ಕುಕನೂರು | 100 |
| | | ಕೊಪ್ಪಳ | 74 | ಅಳವಂಡಿ | 100 |
| | | ಕೊಪ್ಪಳ | 75 | ಕೊಪ್ಪಳ ಟೌನ್ | 100 |
| | | ಗಂಗಾವತಿ | 76 | ಕಾರಟಗಿ | 100 |
| 21 | ಮಂಡ್ಯ | ನಾಗಮಂಗಲ | 77 | ಬೆಳ್ಳೂರು ಕ್ರಾಸ್ | 100 |
| | | ಮದ್ದೂರು | 78 | ಕೆ.ಎಂ. ದೊಡ್ಡಿ | 100 |
| | | ಮದ್ದೂರು | 79 | ಮದ್ದೂರು ಟೌನ್ | 100 |
| 22 | ಮೈಸೂರು | ಕೆ.ಆರ್. ನಗರ | 80 | ಕೆ.ಆರ್. ನಗರ ಟೌನ್ | 100 |
| 23 | ರಾಯಚೂರು | ಲಿಂಗಸಗೂರು | 81 | ಮುದಗಲ್ | 100 |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕು/ಕ್ಷೇತ್ರದ ಹೆಸರು | ಕ್ರ. ಸಂ. | ಮಂಜೂರು ಮಾಡಬೇಕಾಗಿರುವ ಸ್ಥಳ | ಮಂಜೂರು ಮಾಡಬೇಕಾಗಿರುವ ಸಂಖ್ಯಾಬಲ |
|---|---|---|---|---|---|
| 1 | 2 | 3 | 4 | 5 | 6 |
| | | ಲಿಂಗಸಗೂರು | 82 | ಮಸ್ಕಿ | 100 |
| | | ಲಿಂಗಸಗೂರು | 83 | ಹಟ್ಟಿ | 100 |
| | | ರಾಯಚೂರು | 84 | ಕೃಷಿ ವಿಶ್ವವಿದ್ಯಾಲಯ ಆವರಣ | 100 |
| 24 | ತುಮಕೂರು | ತುಮಕೂರು | 85 | ತುಮಕೂರು ಟೌನ್ | 100 |
| | | ಪಾವಗಡ | 86 | ಪಾವಗಡ | 100 |
| | | ತಿಪಟೂರು | 87 | ತಿಪಟೂರು ಟೌನ್ | 100 |
| | | ಚಿಕ್ಕನಾಯಕನಹಳ್ಳಿ | 88 | ಬೋರನಕಣಿವೆ | 100 |
| | | ಕೊರಟಗೆರೆ | 89 | ಕೊರಟಗೆರೆ ಟೌನ್ | 100 |
| 25 | ಉತ್ತರ ಕನ್ನಡ | ಜೋಯಿಡಾ | 90 | ಕುಂಬಾರವಾಡ | 100 |
| | | ಸಿದ್ದಾಪುರ | 91 | ಸಿದ್ದಾಪುರ ಟೌನ್ | 100 |
| | | ಮುಂಡಗೋಡ | 92 | ಮುಂಡಗೋಡ ಟೌನ್ | 100 |
| | | ದಾಂಡೇಲಿ | 93 | ದಾಂಡೇಲಿ ಟೌನ್ | 100 |
| 26 | ಯಾದಗಿರಿ | ಶಹಪೂರ | 94 | ಶಹಪೂರ ಟೌನ್ | 100 |
| | | ಸುರಪುರ | 95 | ಕೆಂಬಾವಿ | 100 |
| 27 | ಶಿವಮೊಗ್ಗ | ಸೊರಬ | 96 | ಆನವಟ್ಟಿ | 100 |
| | | ಶಿವಮೊಗ್ಗ | 97 | ಶಿವಮೊಗ್ಗ | 100 |
| | | ಶಿಕಾರಿಪುರ | 98 | ಶಿರಾಳಕೊಪ್ಪ | 100 |
| | | ಸಾಗರ | 99 | ಜೋಗ್ | 100 |
| | | ಸಾಗರ | 100 | ತುಮರಿ | 100 |

**ಎನ್.ಆರ್.ಎರೆಕುಪ್ಪಿ**
ಸರ್ಕಾರದ ಅಧೀನ ಕಾರ್ಯದರ್ಶಿ–1
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**PR. 59**
**SC. 5000**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

## FINANCE SECRETARIAT

**Sub:** Accounting of inadmissible transactions under the object head ``060- Compensatory Cost''

**GOVERNMENT ORDER NO. FD 24 GIE 2014, BENGALURU, DATED: 09th DECEMBER, 2015.**

**PREAMBLE:**

The Government of Karnataka has enacted ``The Karnataka Guarantee of Services to Citizens Act, 2011'' to guarantee service to the citizens in the State of Karnataka within a prescribed time limit. The Act entitles citizens to seek Compensatory Cost in accordance with the provisions of the Act for delay or default in delivery of such services beyond the stipulated time. The object head with the code ``060'' has been assigned for the Compensatory Cost payable and subsequent recovery from the officials concerned. The provision in the major head is not for re-appropriation to any other head of account either within the major head or within the demand. It is however observed by Audit that expenditure on inadmissible items to the tune of ₹. 18.55 lakhs was incurred under the major head ``2230-Labour and Employment'' for expenditure relating to purchase of stationery, toner cartridge, photocopier, datacard, pendrives, payments of honoraria and salaries for wages for contract labourers etc. The Drawing and Disbursing Officers and the Treasury Officers have to forthwith such re-appropriations including expenditure on inadmissible items out of the object head 060-Compensatory Cost. In order to stop the continuation of such drawals, it is felt necessary to bring the provisions and the procedure. Hence the Order.

**ORDER**

1. The provision made in the budget under the object head 060-Compensatory Cost is for payment to the citizens in case of delay or default in delivery of services beyond the prescribed time as per the The Karnataka Guarantee of Services to Citizens Act, 2011.
2. The expenditure to be incurred by the Drawing and Disbursing Officer shall be only for payment of compensatory cost.
3. The Drawing and Disbursing Officer and the authorities empowered to issue re-appropriation orders shall not re-appropriate from this object head to any other object head within the major head as well as Demand.
4. The Treasuries shall carefully scrutinize the bills preferred under the object head 060-Compensatory Cost based on the orders issued by the competent authority under the Act.
5. Recoveries if any either from salary or by remittance shall be classified under Recovery of Compensatory Cost under The Karnataka Guarantee of Services to Citizens Act, 2011.
6. Any violations of the provisions in the order will be viewed very seriously.

By Order and in the name of the Governor of Karnataka,

**Dipti Aditya Kanade,**

Deputy Secretary to Government (B & R),

Finance Department.

**PR. 94**

**SC. 500**

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ:** ಬೆಂಗಳೂರು ವಿಶ್ವವಿದ್ಯಾಲಯದ ಘಟಕ ಕಾಲೇಜಾಗಿ ವಿಲೀನಗೊಂಡಿರುವ ಚಿಕ್ಕಬಳ್ಳಾಪುರದ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯದ ಡಾ. ಕೋಡಿರಂಗಪ್ಪ, ಸಹ ಪ್ರಾಧ್ಯಾಪಕರು ಇವರ ವಯೋನಿವೃತ್ತಿ ವಯಸ್ಸನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಇಡಿ 64 ಯುಬಿವಿ 2015, ದಿನಾಂಕ: 26.06.2015.
2. ಸರ್ಕಾರದ ಪತ್ರ ಸಂಖ್ಯೆ: ಇಡಿ 64 ಯುಬಿವಿ 2015, ದಿನಾಂಕ: 21.12.2015.
3. ಕುಲಸಚಿವರು, ಬೆಂಗಳೂರು ವಿಶ್ವವಿದ್ಯಾಲಯ ಇವರ ಆದೇಶ ಸಂಖ್ಯೆ: ಎಸಿಎ–3:ಎ3: ಜಿಸಿಇ:2015–16, ಬೆಂಗಳೂರು, ದಿನಾಂಕ: 23.12.2015.
4. ಕುಲಸಚಿವರು, ಬೆಂಗಳೂರು ವಿಶ್ವವಿದ್ಯಾಲಯ ಇವರ ಪತ್ರ ಸಂಖ್ಯೆ: ಎಸಿಎ–3:ಎ3:ಜಿಸಿಇ: 2015–16, ಬೆಂಗಳೂರು, ದಿನಾಂಕ: 23.12.2015.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ, 2000ರ ಪ್ರಕರಣ 82ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಚಿಕ್ಕಬಳ್ಳಾಪುರದ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯವನ್ನು ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ಆದೇಶದನ್ವಯ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ವರ್ಗಾಯಿಸಲಾಗಿತ್ತು. ಈ ರೀತಿ ವರ್ಗಾಯಿಸಲಾದ ಸದರಿ ಕಾಲೇಜಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ವೇತನ ಭತ್ಯೆ ಇತರ ಆರ್ಥಿಕ ವೆಚ್ಚವನ್ನು ಭರಿಸಲು ರಾಜ್ಯ ಶಿಕ್ಷಣ ಸಂಶೋಧನ ತರಬೇತಿ ಇಲಾಖೆಗೆ ಒದಗಿಸಲಾಗುತ್ತಿದ್ದ ಅನುದಾನವನ್ನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ವರ್ಗಾಯಿಸುವ ಪ್ರಸ್ತಾವನೆಗೆ ಮೇಲೆ ಓದಲಾದ

ಕ್ರಮಸಂಖ್ಯೆ: (2)ರ ಪತ್ರದಲ್ಲಿ ಸರ್ಕಾರದ ಅನುಮತಿ ನೀಡಲಾಗಿದೆ. ಅದರಂತೆ ಮೇಲೆ ಕ್ರಮಸಂಖ್ಯೆ: (3)ರಲ್ಲಿ ಓದಲಾದ ಆದೇಶದನುಸಾರ ಚಿಕ್ಕಬಳ್ಳಾಪುರ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯವನ್ನು ಬೆಂಗಳೂರು ವಿಶ್ವವಿದ್ಯಾಲಯದ ಘಟಕ ಕಾಲೇಜಾಗಿ ಸೇರ್ಪಡೆಗೊಳಿಸಿ "ವಿಶ್ವವಿದ್ಯಾಲಯ ಶಿಕ್ಷಣ ಕಾಲೇಜು, ಬೆಂಗಳೂರು ವಿಶ್ವವಿದ್ಯಾಲಯ ಚಿಕ್ಕಬಳ್ಳಾಪುರ" ಎಂದು ಮರುನಾಮಕರಣಗೊಳಿಸಲಾಗಿದೆ.

ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಕಾರ್ಯನೀತಿಯನ್ನು ಅನುಸರಿಸಿ, ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ಕರ್ನಾಟಕ ರಾಜ್ಯದ ವಿಶ್ವವಿದ್ಯಾಲಯಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ವರ್ಗದ ಸಿಬ್ಬಂದಿಯ ವಯೋನಿವೃತ್ತಿಯ ವಯಸ್ಸನ್ನು ಸರ್ಕಾರದ ಆದೇಶ ಸಂಖ್ಯೆ: ಇಡಿ 37 ಯುಎನ್ಇ 2009(ಭಾಗ), ದಿನಾಂಕ: 15.10.2009ರನ್ವಯ 60 ವರ್ಷದಿಂದ 62 ವರ್ಷಗಳಿಗೆ ಹೆಚ್ಚಿಸಲಾಗಿದೆ. ಅದರಂತೆ ಬೆಂಗಳೂರು ವಿಶ್ವವಿದ್ಯಾಲಯದ ಘಟಕ ಕಾಲೇಜಾಗಿ ಸೇರ್ಪಡೆಗೊಂಡಿರುವ ಚಿಕ್ಕಬಳ್ಳಾಪುರದ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯದಲ್ಲಿ ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ವೇತನ ಪಡೆದು ಕಾರ್ಯನಿರ್ವಹಿಸುತ್ತಿರುವ ಹಾಗೂ ಮೂಲತ: ಸದರಿ ಕಾಲೇಜಿಗೆ ಸೇರಿದ ಮತ್ತು ದಿನಾಂಕ: 31.12.2015ರಂದು ವಯೋನಿವೃತಿ ಹೊಂದಲಿರುವ ಡಾ.ಕೋಡಿರಂಗಪ್ಪ, ಸಹ ಪ್ರಾಧ್ಯಾಪಕರು, ಇವರ ವಯೋನಿವೃತ್ತಿ ವಯಸ್ಸನ್ನು 60 ರಿಂದ 62 ವರ್ಷಗಳಿಗೆ ಪರಿಷ್ಕರಿಸಲು ಕೋರಿ ಮೇಲೆ ಕ್ರಮಸಂಖ್ಯೆ: (4)ರಲ್ಲಿ ಓದಲಾದ ಪತ್ರದಲ್ಲಿ ಸಲ್ಲಿಸಲಾದ ಪ್ರಸ್ತಾವನೆಯನ್ನು ಕೂಲಂಷವಾಗಿ ಪರಿಶೀಲಿಸಿದ ಸರ್ಕಾರದ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 64 ಯುಬಿವಿ 2015, ಬೆಂಗಳೂರು, ದಿನಾಂಕ: 31.12.2015.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ, 2000ರ, ಪ್ರಕರಣ 82ರಡಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸೇರ್ಪಡೆಯಾಗಿ "ವಿಶ್ವವಿದ್ಯಾಲಯ ಶಿಕ್ಷಣ ಕಾಲೇಜು, ಬೆಂಗಳೂರು ವಿಶ್ವವಿದ್ಯಾಲಯ ಚಿಕ್ಕಬಳ್ಳಾಪುರ" ಎಂದು ಮರುನಾಮಕರಣಗೊಂಡಿರುವ ಚಿಕ್ಕಬಳ್ಳಾಪುರದ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯದಲ್ಲಿ ಯು.ಜಿ.ಸಿ. ವೇತನ ಶೇಣಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಹಾಗೂ ಮೂಲತ: ಸದರಿ ಕಾಲೇಜಿಗೆ ಸೇರಿದ ಡಾ. ಕೋಡಿರಂಗಪ್ಪ, ಸಹಪ್ರಾಧ್ಯಾಪಕರು ಇವರ ವಯೋನಿವೃತ್ತಿ ವಯಸ್ಸನ್ನು 60 ರಿಂದ 62 ವರ್ಷಗಳಿಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಸುಬ್ರಮಣ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು–2).

**PR. 65**

**SC. 50**

## ಶಿಕ್ಷಣ ಸಚಿವಾಲಯ

**ವಿಷಯ:** ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯ ಚಿಕ್ಕಬಳ್ಳಾಪುರ–ಈ ಶಿಕ್ಷಣ ಮಹಾವಿದ್ಯಾಲಯವನ್ನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:** ಕುಲಸಚಿವರು, ಬೆಂಗಳೂರು ವಿಶ್ವವಿದ್ಯಾಲಯ, ಇವರ ಪತ್ರ ಸಂಖ್ಯೆ: ಎಸಿಎ–3/ಎ3/ಜಿಸಿಇ/ 2015–16, ದಿನಾಂಕ: 09.05.2015.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕುಲಸಚಿವರು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ಇವರು ಚಿಕ್ಕಬಳ್ಳಾಪುರದ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯವನ್ನು ಬೆಂಗಳೂರು ವಿಶ್ವವಿದ್ಯಾಲಯದ ಘಟಕ ಕಾಲೇಜನ್ನಾಗಿ ಸೇರ್ಪಡೆಗೊಳಿಸುವ ವಿಷಯವನ್ನು ದಿ: 10.04.2015ರಂದು ಜರುಗಿದ ಸಿಂಡಿಕೇಟ್ ಸಭೆಯಲ್ಲಿ ಚರ್ಚಿಸಿ ಅನುಮೋದಿಸಲಾಗಿರುತ್ತದೆ. ಈ ನಿಟ್ಟಿನಲ್ಲಿ ಚಿಕ್ಕಬಳ್ಳಾಪುರದ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯದ ಆಸ್ತಿ–ಋಣಭಾರ, ಬೋಧಕ–ಬೋಧಕೇತರ ಸಿಬ್ಬಂದಿಗಳ ವಿವರಗಳು ಹಾಗೂ ಇತರೆ ವಿಷಯಗಳ ಬಗ್ಗೆ ಪರಿಶೀಲಿಸಿ ವರದಿ ನೀಡಲು ಪ್ರೊ॥ ಸಿದ್ದಲಿಂಗಯ್ಯ ಸಿಂಡಿಕೇಟ್ ಸದಸ್ಯರು ಹಾಗೂ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ ಇವರ ಅಧ್ಯಕ್ಷತೆಯಲ್ಲಿ ಸಿಂಡಿಕೇಟ್ ಉಪಸಮಿತಿಯನ್ನು ರಚಿಸಿರುತ್ತದೆ. ಸದರಿ ಉಪಸಮಿತಿಯು ದಿ: 24.4.2015 ರಂದು ಸದರಿ ಕಾಲೇಜಿಗೆ ಭೇಟಿ ನೀಡಿ ವರದಿಯನ್ನು ಸಲ್ಲಿಸಿದ್ದು, ಸದರಿ ವರದಿಯನ್ನು ದಿ: 25.04.2015.ರಂದು ಜರುಗಿದ ಸಿಂಡಿಕೇಟ್ ಸಭೆಯಲ್ಲಿ ಅನುಮೋದಿಸಲಾಗಿರುತ್ತದೆ.

ಪ್ರೊ॥ ಸಿದ್ದಲಿಂಗಯ್ಯ ಇವರ ಅಧ್ಯಕ್ಷತೆಯ ಸಿಂಡಿಕೇಟ್ ಉಪಸಮಿತಿಯು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ವರದಿಯಲ್ಲಿ ಚಿಕ್ಕಬಳ್ಳಾಪುರದ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯದಲ್ಲಿ ಉತ್ತಮ ಶೈಕ್ಷಣಿಕ ವಾತಾವರಣವಿರುವುದು ಹಾಗೂ ಅಲ್ಲಿನ ಶಿಕ್ಷಕರು ಸಮರ್ಪಣಾ ಮನೋಭಾವದಿಂದ ಶೈಕ್ಷಣಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಬಿ.ಇಡಿ. ವಿದ್ಯಾರ್ಥಿಗಳಿಗೆ ಉತ್ತಮ ಗುಣಮಟ್ಟದ ಶಿಕ್ಷಣ ಮತ್ತು ತರಬೇತಿಯನ್ನು ನೀಡುತ್ತಿರುವುದು ಗಮನಕ್ಕೆ ಬಂದಿರುತ್ತದೆ. ಸದರಿ ಕಾಲೇಜಿನ ವಿದ್ಯಾರ್ಥಿಗಳ ಪರೀಕ್ಷಾ ಫಲಿತಾಂಶವು ಸಹ ಉತ್ತಮವಾಗಿದ್ದು, ಸರಾಸರಿ ಶೇ.95ಕ್ಕಿಂತ ಹೆಚ್ಚಿನ ವಿದ್ಯಾರ್ಥಿಗಳು ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಈ ಕಾಲೇಜು ಬೆಂಗಳೂರು ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿ ಏಕೈಕ ಸರ್ಕಾರಿ ಬಿ.ಇಡಿ. ಕಾಲೇಜು ಆಗಿದ್ದು, ಕೋಲಾರ, ಚಿಕ್ಕಬಳ್ಳಾಪುರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳ ಗ್ರಾಮೀಣ ಮತ್ತು ಹಿಂದುಳಿದ ಭಾಗದ ಬಿ.ಇಡಿ. ವಿದ್ಯಾರ್ಥಿಗಳ ಉನ್ನತ ಶಿಕ್ಷಣದ ಅವಶ್ಯಕತೆಯನ್ನು ಪೂರೈಸುತ್ತಿದೆ. ಈ ಭಾಗದ ವಿದ್ಯಾರ್ಥಿಗಳು ಎಂ.ಇಡಿ ಪದವಿ ಹಾಗೂ ಶಿಕ್ಷಣದಲ್ಲಿ ಸಂಶೋಧನೆ ಕೈಗೊಳ್ಳಲು ಅವಕಾಶ ವಂಚಿತರಾಗಿದ್ದಾರೆ. ಆದ ಕಾರಣ ಉತ್ತಮ ಶಿಕ್ಷಕ ವೃಂದ ಹಾಗೂ ಶೈಕ್ಷಣಿಕ ವಾತಾವರಣವಿರುವ ಸದರಿ ಕಾಲೇಜನ್ನು ಬೆಂಗಳೂರು ವಿಶ್ವವಿದ್ಯಾಲಯದ ಘಟಕ ಕಾಲೇಜನ್ನಾಗಿ ಸೇರ್ಪಡೆಗೊಳಿಸಿದಲ್ಲಿ, ಮುಂದಿನ ದಿನಗಳಲ್ಲಿ ಎಂ.ಇಡಿ. ಪದವಿ ಹಾಗೂ ಸಂಶೋಧನಾ ಕೇಂದ್ರವನ್ನಾಗಿ ಅಭಿವೃದ್ಧಿಪಡಿಸಬಹುದಾಗಿದೆ ಹಾಗೂ ಕೋಲಾರ, ಚಿಕ್ಕಬಳ್ಳಾಪುರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳ ಗ್ರಾಮೀಣ ಮತ್ತು ಹಿಂದುಳಿದ ಭಾಗಗಳ ವಿದ್ಯಾರ್ಥಿಗಳಿಗೆ ಎಂ.ಇಡಿ. ಪದವಿ ಮತ್ತು ಶಿಕ್ಷಣದಲ್ಲಿ ಸಂಶೋಧನೆ ಕೈಗೊಳ್ಳಲು ಹೆಚ್ಚಿನ ಅವಕಾಶ ಒದಗಿಸಿದಂತಾಗುತ್ತದೆ ಎಂದು ತಿಳಿಸಿರುತ್ತದೆ.

ಮೇಲ್ಕಂಡ ಹಿನ್ನೆಲೆಯಲ್ಲಿ ಚಿಕ್ಕಬಳ್ಳಾಪುರದ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯವನ್ನು ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ, 2000 ಪ್ರಕರಣ 82ರ ಅಡಿಯಲ್ಲಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ವರ್ಗಾಯಿಸಿ ಸೂಕ್ತ ಆದೇಶ ಹೊರಡಿಸುವಂತೆ ಕೋರಿ ಬೆಂಗಳೂರು ವಿಶ್ವವಿದ್ಯಾಲಯದ ಕುಲಸಚಿವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 64 ಯುಬಿವಿ 2015, ಬೆಂಗಳೂರು, ದಿನಾಂಕ: 26.06.2015.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಚಿಕ್ಕಬಳ್ಳಾಪುರದ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯವನ್ನು ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ, 2000 ಪ್ರಕರಣ 82ರ ಅಡಿಯಲ್ಲಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ವರ್ಗಾಯಿಸಿ ಆದೇಶ ಹೊರಡಿಸಲಾಗಿದೆ.

1. ಚಿಕ್ಕಬಳ್ಳಾಪುರದ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯವನ್ನು ಬೆಂಗಳೂರು ವಿಶ್ವವಿದ್ಯಾಲಯದ ಒಂದು ಘಟಕ ಕಾಲೇಜನ್ನಾಗಿ ನಿರ್ವಹಿಸತಕ್ಕದ್ದು.
2. ಸದರಿ ಕಾಲೇಜಿನಲ್ಲಿ ಸೇವೆ ಸಲ್ಲಿಸುತ್ತಿರುವ ಅನುಬಂಧದಲ್ಲಿ ನಮೂದಿಸಿರುವ ಬೋಧಕ ಮತ್ತು ಬೋಧಕೇತರ ನೌಕರರು ತಮ್ಮ ಮಾತೃ ಇಲಾಖೆಯಲ್ಲಿ ಮುಂದುವರೆಯಲು ಅಥವಾ ಬೆಂಗಳೂರು ವಿಶ್ವವಿದ್ಯಾಲಯದ ಸೇವೆಗೆ ಸೇರುವ ಬಗ್ಗೆ ಇಚ್ಛಾ ಪತ್ರವನ್ನು ನೀಡಲು ಅವಕಾಶ ಕಲ್ಪಿಸತಕ್ಕದ್ದು.
3. ಸದರಿ ಕಾಲೇಜಿನ ಬೋಧಕ ಮತ್ತು ಬೋಧಕೇತರ ನೌಕರರುಗಳ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ ನಿಯಮಗಳು), 1957ರ ನಿಯಮ 6 ರನ್ವಯ/ಯು.ಜಿ.ಸಿ. ನಿಯಮಗಳನ್ವಯ ಪರಿಗಣಿಸತಕ್ಕದ್ದು.
4. ಚಿಕ್ಕಬಳ್ಳಾಪುರದ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯದ ಗ್ರಂಥಾಲಯ, ಪ್ರಯೋಗಾಲಯ, ಪೀಠೋಪಕರಣ ಇತ್ಯಾದಿಗಳನ್ನು ಒಳಗೊಂಡಂತೆ ಎಲ್ಲಾ ಚರ ಮತ್ತು ಸ್ಥಿರಾಸ್ತಿಗಳನ್ನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ವರ್ಗಾಯಿಸತಕ್ಕದ್ದು. ಈ ಪ್ರಕ್ರಿಯೆಯಲ್ಲಿ ಏನಾದರೂ ಮಾರ್ಗದರ್ಶನ ಅಥವಾ ಸ್ಪಷ್ಟೀಕರಣ ಅವಶ್ಯವಿದ್ದಲ್ಲಿ ಒಂದು ಅಂತಿಮ ವರದಿಯೊಂದಿಗೆ ಸರ್ಕಾರವನ್ನು ಸಂಪರ್ಕಿಸತಕ್ಕದ್ದು.
5. ಸರ್ಕಾರದಿಂದ ಸದರಿ ಕಾಲೇಜಿಗೆ ಮಂಜೂರಾಗಿರುವ ಅವಲಗುರ್ಕಿ ಗ್ರಾಮ ಪಂಚಾಯಿತಿಯ, ಹೊನ್ನೇನಹಳ್ಳಿ ಗ್ರಾಮದ ಸರ್ವೇ ನಂ. 7/1ರಲ್ಲಿ 0.7 ಎಕರೆ ಜಮೀನು (27 ಗುಂಟೆಗಳು) ಹಾಗೂ 14,000 ಚದರ ಅಡಿಗಳ ಕಟ್ಟಡವನ್ನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ವರ್ಗಾಯಿಸತಕ್ಕದ್ದು.
6. ವಿಜಯ ಬ್ಯಾಂಕ್, ಚಿಕ್ಕಬಳ್ಳಾಪುರ ಶಾಖೆಯ ಕಾಲೇಜಿನ ಖಾತೆಯಲ್ಲಿರುವ ಒಟ್ಟು ಹಣವನ್ನು ಬೆಂಗಳೂರು ವಿಶ್ವವಿದ್ಯಾಲಯದ ನಿಧಿಗೆ ವರ್ಗಾಯಿಸತಕ್ಕದ್ದು.
7. ಸದರಿ ಮಹಾವಿದ್ಯಾಲಯದ ಎಲ್ಲಾ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ಬೆಂಗಳೂರು ವಿಶ್ವವಿದ್ಯಾಲಯದ ಸಿಬ್ಬಂದಿಗಳೆಂದು ಪರಿಗಣಿಸಿ, ಇವರುಗಳಿಗೆ ವೇತನ, ಭತ್ಯೆ ಹಾಗೂ ಇತರೆ ಆರ್ಥಿಕ ಸೌಲಭ್ಯಗಳನ್ನು ಬೆಂಗಳೂರು ವಿಶ್ವವಿದ್ಯಾಲಯವು ತನ್ನ ಆಂತರಿಕ ಸಂಪನ್ಮೂಲದಿಂದ ಹಾಗೂ ಸರ್ಕಾರವು ಕಾಲಕಾಲಕ್ಕೆ ಬಿಡುಗಡೆ ಮಾಡುವ ಅನುದಾನದಿಂದ ಭರಿಸತಕ್ಕದ್ದು.
8. ಕಾಲೇಜಿನ ಎಲ್ಲಾ ರೀತಿಯ ಶೈಕ್ಷಣಿಕ ಚಟುವಟಿಕೆಗಳನ್ನು ಬೆಂಗಳೂರು ವಿಶ್ವವಿದ್ಯಾಲಯವು ಮುಂದುವರೆಸಿಕೊಂಡು ಹೋಗತಕ್ಕದ್ದು.
9. ಸದರಿ ಕಾಲೇಜಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯ ಪ್ರಸ್ತುತ ವೇತನ ಶ್ರೇಣಿಯನ್ನು ಯಥಾವತ್ತಾಗಿ ಮುಂದುವರೆಸತಕ್ಕದ್ದು ಮತ್ತು ಇತರೆ ಸೇವಾ ವಿಷಯಗಳನ್ನು ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ, 2000 ಮತ್ತು ಬೆಂಗಳೂರು ವಿಶ್ವವಿದ್ಯಾಲಯದ ಅನುಮೋದಿತ ಪರಿನಿಯಮಗಳ ಪ್ರಕಾರ ನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಸುಬ್ರಮಣ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು–2)

**ಸರ್ಕಾರಿ ಆದೇಶ ಸಂಖ್ಯೆ: ಇಡಿ 64 ಯುಬಿವಿ 2015, ದಿನಾಂಕ: 26–06–2015.**

**ಅನುಬಂಧ**

**ಬೋಧಕ ಸಿಬ್ಬಂದಿಗಳ ವಿವರ:–**

| ಕ್ರಮ ಸಂಖ್ಯೆ | ಹೆಸರು | ಪದನಾಮ | ಶೈಕ್ಷಣಿಕ ವಿದ್ಯಾರ್ಹತೆ | ಅನುಭವ |
|---|---|---|---|---|
| 1 | ರಾಜೇಂದ್ರ ಕೆ.ಜಿ. | ಪ್ರಾಂಶುಪಾಲರು | ಎಂ.ಎ., ಬಿ.ಇಡಿ., ಕೆ.ಇ.ಎಸ್. | 25 ವರ್ಷ |
| 2 | ಡಾ॥ ಶಿವರಾಮ ರೆಡ್ಡಿ ಎನ್. | ಸಹ ಪ್ರಾಧ್ಯಾಪಕರು | ಬಿ.ಎಸ್ಸಿ. ಎಂ.ಇಡಿ., ಪಿಹೆಚ್.ಡಿ. | 29 ವರ್ಷ |
| 3 | ಡಾ॥ ಕೋಡಿರಂಗಪ್ಪ | ಸಹ ಪ್ರಾಧ್ಯಾಪಕರು | ಎಂ.ಎ. (ಕನ್ನಡ), ಎಂ.ಎ.(ಇತಿಹಾಸ), ಎಂ.ಇಡಿ., ಪಿಹೆಚ್.ಡಿ. | 29 ವರ್ಷ |
| 4 | ಸಿ.ಎಂ. ಲೀಲಾವತಿ | ಸಹಾಯಕ ಪ್ರಾಧ್ಯಾಪಕರು | ಎಂ.ಎ., ಎಂ.ಇಡಿ., ಎಂ.ಫಿಲ್., (ಪಿಹೆಚ್.ಡಿ.) | 25 ವರ್ಷ |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರಮ ಸಂಖ್ಯೆ | ಹೆಸರು | ಪದನಾಮ | ಶೈಕ್ಷಣಿಕ ವಿದ್ಯಾರ್ಹತೆ | ಅನುಭವ |
|---|---|---|---|---|
| 5 | ಜಿ.ಪಿ. ಬಾಹುಬಲಿ | ಸಹಾಯಕ ಪ್ರಾಧ್ಯಾಪಕರು | ಎಂ.ಎಸ್ಸಿ., ಎಂ.ಇಡಿ., ಎಂ.ಫಿಲ್., (ಪಿಹೆಚ್.ಡಿ.) | 22 ರ್ಷ |
| 6 | ಎನ್. ಲೋಕನಾಥ್ | ಸಹಾಯಕ ಪ್ರಾಧ್ಯಾಪಕರು | ಎಂ.ಎ., ಎಂ.ಇಡಿ., ಎಂ.ಫಿಲ್., ಎಸ್.ಎಲ್.ಇ.ಟಿ., (ಪಿಹೆಚ್.ಡಿ) | 20 ವರ್ಷ |
| 7 | ವಿ. ನಾರಾಯಣಸ್ವಾಮಿ | ಸಹಾಯಕ ಪ್ರಾಧ್ಯಾಪಕರು | ಎಂ.ಎ., ಎಂ.ಇಡಿ., ಎಂ.ಫಿಲ್. –ಶಿಕ್ಷಣ, ಎಂ.ಫಿಲ್.–ಭೂಗೋಳಶಾಸ್ತ್ರ. | 20 ವರ್ಷ |
| 8 | ಎಂ. ಶಂಕರಪ್ಪ | ಸಹಾಯಕ ಪ್ರಾಧ್ಯಾಪಕರು | ಎಂ.ಎಸ್ಸಿ., ಎಂ.ಇಡಿ., ಎನ್.ಇ.ಟಿ. (ಶಿಕ್ಷಣ), ಕೆ.ಇ.ಎಸ್., (ಪಿಹೆಚ್.ಡಿ) | 10 ವರ್ಷ |

**ಬೋಧಕೇತರ ಸಿಬ್ಬಂದಿಗಳ ವಿವರ:–**

| ಕ್ರಮ ಸಂಖ್ಯೆ | ಹೆಸರು | ಪದನಾಮ | ಶೈಕ್ಷಣಿಕ ವಿದ್ಯಾರ್ಹತೆ |
|---|---|---|---|
| 1 | ––– | ಪ್ರಥಮ ದರ್ಜೆ ಸಹಾಯಕ | ಖಾಲಿ |
| 2 | –––– | ದ್ವಿತೀಯ ದರ್ಜೆ ಸಹಾಯಕ | ಖಾಲಿ |
| 3 | ಕೆ.ಎಸ್.ಸುದರ್ಶನ್ | ದ್ವಿತೀಯ ದರ್ಜೆ ಸಹಾಯಕ | ಬಿ.ಎ. |
| 4 | ಕೆ.ಎನ್. ವೇಣುಗೋಪಾಲ್ | ದ್ವಿತೀಯ ದರ್ಜೆ ಸಹಾಯಕ | ಬಿ.ಎ. |
| 5 | ಸುಮಿತ್ರಮ್ಮ | ಟೈಪಿಸ್ಟ್ | ಬಿ.ಎ. |
| 6 | ಲತಾ | ದ್ವಿತೀಯ ದರ್ಜೆ ಸಹಾಯಕ | ಪಿ.ಯು.ಸಿ. |
| 7 | ಜಿ.ಎನ್. ರಾಜಣ್ಣ | ಅಟೆಂಡರ್ | ಎಸ್.ಎಸ್.ಎಲ್.ಸಿ.ಅನುತ್ತೀರ್ಣ |
| 8 | ಖಾಜಾ ಜಾವೀದ್ | ಡಿ–ದರ್ಜೆ | ಎಸ್.ಎಸ್.ಎಲ್.ಸಿ. ಅನುತ್ತೀರ್ಣ |
| 9 | ಮುನಿರತ್ನಮ್ಮ | ಸ್ವೀಪರ್ | ಎಸ್.ಎಸ್.ಎಲ್.ಸಿ. |

**ಕೆ.ಎಲ್. ಸುಬ್ರಮಣ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು–2).

**PR. 35**
**SC. 50**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59